# ಸಿದ್ಧಗಂಗಾ

ಸಂಪುಟ-೨೬ ಸಂಚಿಕೆ-೨ ಫೆಬ್ರವರಿ-೧೯೯೦

ಅಲ್ಪಶ್ರಮ, ಅಧಿಕ ಲಾಭದ ಮನೋಧರ್ಮವನ್ನು
ಬೆಳೆಸಿಕೊಳ್ಳುತ್ತಿರುವ ಯುವಜನಾಂಗದ
ಪ್ರವೃತ್ತಿ ರಾಷ್ಟ್ರ ಪ್ರಗತಿಗೆ ಆಶಾದಾಯಕ
ವಾದುದಲ್ಲ, ನಿಷ್ಕ್ರಿಯತೆ, ಆಲಸ್ಯಗಳು,
ಪ್ರಗತಿಯ ಮಹಾಕಂಟಕಗಳು.

—ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

# ಸಿದ್ಧಗಂಗಾ

ಸಂಪುಟ-೨೬ ಸಂಚಿಕೆ-೨. ಫೆಬ್ರವರಿ-೧೯೯೦

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಚರಲಿಂಗ ಶ್ರೀ ಗುರುವೆರಲಿಂಗ ಶ್ರೀ ಗುರುವೆ
ಶಿರಲಿಂಗ ಶ್ರೀ ಗುರುವೆ ನನ್ನ ತಂದೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು

ಸಂಕಲ್ಪ ಲಿಂಗವೆ ಸರ್ವಾಂಗ ಲಿಂಗವೆ
ಸಾನಂದ ಲಿಂಗವೆ ನನ್ನ ಗುರುವೆ॥ ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಭಾವಲಿಂಗ ಗುರುವೆ ಪ್ರಾಣಲಿಂಗ ಗುರುವೆ
ಬಸವಲಿಂಗವಾದೆ ನನ್ನ ತಂದೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

— ಹೆಚ್. ವಿ. ವೀರಭದ್ರಯ್ಯ

# ಶ್ರೀ ವಾಣಿ



## ಮಠಮಾನ್ಯಗಳು.

ಮಠಮಾನ್ಯಗಳು ಶಿಕ್ಷಣ ಸಂಸ್ಥೆಗಳನ್ನು ತಾಂತ್ರಿಕ ವೈದ್ಯಕೀಯ ಕಾಲೇಜುಗಳನ್ನು ನಡೆಸುವ ಅಗತ್ಯವೇನಿದೆ? ಎಂಬಂಥ ಮಾತುಗಳನ್ನು ಜನನಾಯಕರು ಸಾರ್ವಜನಿಕ ವೇದಿಕೆಗಳಿಂದ ಆಡುತ್ತಿರುವುದು ಕೇಳಿ ಬರುತ್ತಿದೆ. ಮಠಗಳ ಮೂಲ ಉದ್ದೇಶವನ್ನು ಅರ್ಥಮಾಡಿಕೊಳ್ಳದೆ ಆಡಿದ ಮಾತುಗಳು ಇವು ಎಂದು ನಮಗನ್ನಿಸುತ್ತದೆ. ಯಾವುದೇ ಧರ್ಮ ಸಾಂಸ್ಕೃತಿಕ ವ್ಯವಸ್ಥೆಯನ್ನು ಕಾಪಾಡಿಕೊಂಡು ಬಂದಿರುವುದನ್ನು ಇತಿಹಾಸ ...ಂದ ತಿಳಿಯಬಹುದು. ಸಂಸ್ಥೆಗಳ ಅಸ್ತಿತ್ವವಾದರೂ ಧರ್ಮದ ಉಳಿವಿಗಾಗಿ. ಧರ್ಮವೆಂಬುದು ಕೇವಲ ವ್ಯಕ್ತಿಯ ಉದ್ಧಾರವನ್ನು ಮಾತ್ರ ಹೇಳುವುದಲ್ಲ. ಸಮಷ್ಟಿಯ ಅಭಿವೃದ್ಧಿಯನ್ನು ಸಾಧಿಸುವುದು ಅದರ ಗುರಿ. ಕತ್ತಲಲ್ಲಿ ...ರುವುದನ್ನು ಬೆಳಕಿಗೆ ತರುವ ಪ್ರಯತ್ನ. ಲೋಕ ಸಂಗ್ರಹ ಚರ್ಯೆಯಿಂದ ...ದೂರಸರಿದುದಲ್ಲ. ಅದರಲ್ಲೂ ಶರಣ ಸಿದ್ಧಾಂತದಲ್ಲಿ ಕರ್ತಾರನಕಮ್ಮಟವ ...ದುಕು ಸುಂದರವಾಗುವಂತೆ ನಡೆಯುವುದೇ ತನ್ನ ಗುರಿಯೆಂದು ಹೇಳಲಾಗಿದೆ. ...ಲ್ಲಿ ಸಲ್ಲುವಂತೆ ಬಾಳುವುದಕ್ಕೆ ಬೇಕಾದ ಎಲ್ಲ ವ್ಯವಸ್ಥೆಯನ್ನೂ ಧರ್ಮ ಸಂಸ್ಥೆಗಳು ಅಂದರೆ ಮಠಮಾನ್ಯಗಳು ಕೈಗೊಂಡ ಯಾವ ಕಾರ್ಯಕ್ರಮ ...ಳೂ ವ್ಯರ್ಥವಲ್ಲ. ಶಿಕ್ಷಣ ಸಂಸ್ಥೆಗಳು ಅದರಲ್ಲೂ ಮಠಮಾನ್ಯಗಳು ನಡೆಸು...ರುವ ಶಿಕ್ಷಣ ಸಂಸ್ಥೆಗಳ ಸೇವೆಯಿಂದ ಕರ್ನಾಟಕದಲ್ಲಿ ಇಂದು ಕೋಟ್ಯಂತರ ...ನ ಅಕ್ಷರಸ್ಥರಾಗುತ್ತಿರುವುದು ರಾಷ್ಟ್ರದ ಸೇವೆಯಲ್ಲವೆ? ಸರ್ಕಾರ ಮಾಡು...ರುವ ಕಾರ್ಯದಲ್ಲಿ ನೆರವಾಗುತ್ತಿರುವ ಮುಕ್ತ ಸಹಕಾರವೇ ಆಗಿದೆತಾನೆ? ...ಂತಹ ಸೇವೆ ಜನತೆಗೆ ಇಲ್ಲವಾಗಬೇಕೆ, ಧರ್ಮ ಬದುಕನ್ನು ಬಿಟ್ಟಿಲ್ಲ.

...12-2-90 ರಂದು ವಸ್ತುಪ್ರದರ್ಶನದ ಆರಂಭೋತ್ಸವದಲ್ಲಿ ಮಾಡಿದ ಆಶೀರ್ವಚನದಿಂದ)

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572 104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪ್ರೊ|| ಚನ್ನಪ್ಪ ಎರೇಸೀಮೆ

* * *

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಸಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ವಿತರಣೆ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ


### ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಅಜೀವ ಸದಸ್ಯತ್ವ 250-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂ
ಮಠದಿಂದ ಪ್ರಕಟವಾಗುತ್ತಿರುವ ಮಾ
ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್
ಸಂಘದ ಹೆಮ್ಮೆಯ ಸೇವಾ ಪುರವಣ
ಮೇಲಾಗಿ ಶ್ರೀ ಮಠದ ಮುಖವಾ
ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮ
ಮಹಾಸ್ವಾಮಿಗಳವರ ದಿವ್ಯ ಮಾರ್ಗದ
ನದಲ್ಲಿ ಮುನ್ನಡೆದಿರುವ ಪತ್ರಿಕೆ. ಶ್ರೀ
ದಾಸೋಹ ಸೇವಾ ತತ್ಪರತೆಯಿಂದ ಹ
ಹಾಕುತ್ತಿದೆ. ಈ ಧ್ಯೇಯ ಸಾಧನೆಗ
ನಾಡಿನ ಗಣ್ಯ ಲೇಖಕರಿಂದ ಸಾಹಿ
ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷ
ಇತಿಹಾಸ, ವೈಚಾರಿಕ, ಚಿಂತನ ಮುಂತ
ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀ
ಲೇಖನಗಳನ್ನು ಪಡೆಯಲು ಸಾಕ
ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇ
ಲೇಖನಗಳಲ್ಲಿ ಸೂಕ್ತ ಬದಲಾವಣೆ ಮ
ಕೊಳ್ಳುವ ಅಧಿಕಾರ ಸಂಪಾದಕರಿ
ಅನುವಾದ, ರೂಪಾಂತರ ಲೇಖನಗ
ಮೂಲ ಕೃತಿಕಾರರ ಅನುಮತಿ ಪಡ
ಬೇಕು. ಸ್ವೀಕೃತ ಲೇಖನಗಳಿಗೆ ಸ
ಸಂಭಾವನೆ ಕೊಡಲಾಗುವುದು.

---

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸಪ
ಶ್ರೀ ಸಿದ್ಧಗಂಗಾ ಕ್ಷೇತ್ರ-572 1
ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾ

## ಶ್ರೀ ಸಿದ್ಧಲಿಂಗೇಶ್ವರ ವಚನ



ಊರಮಧ್ಯದಲ್ಲಿ ಹುಟ್ಟಿದ ಕಿಚ್ಚು ಮೇರುವೆಯ ಸುಟ್ಟಿತ್ತು ನೋಡಾ
ಕೇರಿ ಕೇರಿಯಲ್ಲಿ ಬೀದಿವರಿದು, ಅರಣ್ಯವನಾವರಿಸಿತ್ತು ನೋಡಾ
ಅರಣ್ಯ ದೊಳಗಿರ್ದ ಅಂಗನೆಯ ಮುಡಿಬೆಂದು,
ಊರ ಹತ್ತಿದ ಕಿಚ್ಚು ಉಮಾಪತಿಯ ಸಪ್ಪಲು,
ನಾರಿ ಪುರುಷರಳಿದು ಮಾರಾರಿಯೊರ್ವನೆ ಅದನೋಡಿರೇ
**ಮಹಾಲಿಂಗ ಗುರುಳವ** ಸಿದ್ದೇಶ್ವರ ಪ್ರಭುವೇ

ಶರಣನ ಹೃದಯದಲ್ಲಿ ಉದಯವಾದಜ್ಞಾನ ಅಹಂಕಾರವನ್ನು ಸುಟ್ಟು ಸರ್ವಾವಯನ್ನೆಗಳಲ್ಲಿ ಆಚಾರಾದಿ ಲಿಂಗಗಳಾಗಿ ವ್ಯವಹರಿಸುತ್ತ ಅನಿತ್ಯವಾದುದನ್ನೆಲ್ಲ ದಹಿಸಿ, ಸರ್ವಾಂಗದಲ್ಲಿಯೂ ನಿಷ್ಪತ್ತಿಯಾಗುತ್ತ ದ್ವೈತ ಭಾವವನ್ನಳಿದು ಅಂದರೆ ಶರಣಸತಿ ಲಿಂಗಪತಿ ಎಂಬ ಉಭಯ ಭಾವವನ್ನು ಬಿಟ್ಟು ಲಿಂಗದಲ್ಲಿಯೇ ಒಂದಾಗುವ "ಅಂಗ ಲಿಂಗ" ವ್ಯವಹಾರವನ್ನು ತಿಳಿಸುತ್ತದೆ ವಚನ.

# ಸಂಪಾದಕೀಯ

**ಇದೆಲ್ಲ ಹೇಗೆ ಸಾಧ್ಯ.**

ಶ್ರೀ ಮಠದಲ್ಲಿ ಜಾತ್ರೆ : ಶಿವರಾತ್ರಿ ಸಂದರ್ಭ. 1902 ರಿಂದ ನಡೆದು ಬಂದಿ
ಜನಮನದಲ್ಲಿ ಭಕ್ತಿ ಭಾವಗಳ ತುಂಬುತೊರೆ. ಗುರುತೋರಿಸಿದಪ ಥದಲ್ಲಿ ನಡೆಯ
ಪರಂಪರೆ. ಕ್ಷೇತ್ರಾಧಿಪತಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ವಿವಿಧ ಉತ್ಸವಗಳು. ಹ
ದಿಕ್ಕಿನಿಂದ ಭಕ್ತಾದಿಗಳ ಆಗಮನ. ಜಾನುವಾರುಗಳ ಸಮಾವೇಶ. ವಸ್ತುಪ್ರದಶ
ವ್ಯವಸ್ಥೆ. ದನಗಳ ಪ್ರದರ್ಶನ ವ್ಯವಸ್ಥೆ ದನಗಳ ಪ್ರದರ್ಶನ. ಜಾನಪದ ನೃತ್ಯ
ನಯನ ಮನೋಹರದೃಶ್ಯ. ಬೆಳ್ಳಿಪಲ್ಲಕಿ, ರಥೋತ್ಸವ, ಉತ್ಸವಗಳ ವಿಶೇಷ. ಸಾಂ
-ತಿಕ ಕಾರ್ಯಕ್ರಮಗಳ ನಿತ್ಯೋತ್ಸವ. ಪಂಚಬ್ರಹ್ಮೋತ್ಸವದ ಆಕರ್ಷಣೆ. ಮದ
ಬಾಣ : ಬಿರುಸುಗಳು ಸೃಷ್ಟಿಸುವ ಯಕ್ಷ ಗಂಧರ್ವಲೋಕ, ಗ್ರಾಮೀಣ ಜನತೆ
ಸಂಭ್ರಮ; ಸಡಗರ, ಹರಗುರು ಚರಮೂರ್ತಿಗಳ ದರ್ಶನಾಶೀರ್ವಾದ, ಗ್ರಾಮಾಂ
ಗಳಿಂದ ಬರುವ ರೈತರ ರಾಸುಗಳು ಆಕಸ್ಮಾತ್ ಮರಣಿಸಿದ್ದರೆ ಆ ಸನ್ನಿವೇಶದಲ್ಲಿ ಪ
ಪೂಜ್ಯ ಶ್ರೀ ಶ್ರೀಗಳಿಂದ (ಅಂಥ)ನಷ್ಟವನ್ನು ತುಂಬಿ ಕೊಡುವ ಅಪರೂಪದ ಯೋ
ಜಾನುವಾರುಗಳ ವಿಮೆಯಂಥ ನಾಗರಿಕ ಯೋಜನೆ, ಕಾನೂನು ಶಿಸ್ತು ಪಾಲನೆ
ರಕ್ಷಣಾ ವ್ಯವಸ್ಥೆ, ನೈರ್ಮಲ್ಯ ರಕ್ಷಣೆ, ಕುಡಿವ ನೀರಿಗಾಗಿಯೇ ಲಕ್ಷಾಂತರ ರೂ
ಯಿಗಳ ವಿನಿಯೋಗ, ಜಾತ್ರೆಯಲ್ಲಿ ವಿವಿಧ ಸೇವೆ ಸಲ್ಲಿಸಲು ಬರುವ ಕಲಾವಿದ
ಸೂಕ್ತ ಸಂಭಾವನೆ: ಕೆಲಸ ಕಾರ್ಯಗಳಲ್ಲಿ ತೊಡಗುವ ಸಿಬ್ಬಂದಿ ವರ್ಗದ
ಯೋಗ್ಯ ವೇತನ, ವಿವಿಧ ಅಧಿಕಾರಿಗಳಿಗೆ ಗೌರವ ಪೂರ್ಣ ಆತಿಥ್ಯ, ಹರಗುರು
ಮೂರ್ತಿಗಳಿಗೆ ಆಶೀರ್ವಾದ ಪೂರ್ವಕ ಪ್ರೀತಿಯ ಕಾಣಿಕೆ, ಇಡೀ ಜಾ
ದಾಸೋಹ, ದಾಸೋಹಕ್ಕಾಗಿ ಸಿದ್ಧಪಡಿಸಿದ 50 ಚೀಲ ದನಿಯದ ಪುಡಿ,
ಕ್ವಿಂಟಾಲ್ ಮೆಣಸಿನಕಾಯಿ, ದಿನವೊಂದಕ್ಕೆ 30 ಕ್ವಿಂಟಾಲ್ ಅಕ್ಕಿ, ಮುಂ
ಸರಂಜಾಮು, ಇದೆಲ್ಲ ಓರ್ವ ಸ್ವಾಮಿಗಳಿಂದ ನಡೆದಿದೆಯಾ ಎಂದು ಬೆಕ್ಕಸ ಬೆರ
ಪ್ರಶ್ನೆ ಕೇಳುವವರೆಷ್ಟೋ ಮಂದಿ. ಅದಕ್ಕೆ ಉತ್ತರಿಸುವವರು ವಿರಳ. ಇದೆಲ್ಲಾ
ಸಾಧ್ಯ ಓರ್ವರಿಂದ ಎನ್ನುವವರೂ ಇದ್ದಾರೆ,ಆಧ್ಯಾತ್ಮವನ್ನು ಚಾರಿತ್ರ್ಯ ಶುದ್ಧಿಯಿ
ಕೇವಲ ವೈಯಕ್ತಿಕ ಸಿದ್ಧಿಗಾಗಿ ಬಳಸದೆ ಮಾನವಕಲ್ಯಾಣಕ್ಕಾಗಿ ಬಳಸುವ
ದಲ್ಲಿ ಇದೆಲ್ಲವೂ ಸಾಧ್ಯ ಎಂಬ ಪ್ರತ್ಯಕ್ಷ ಪ್ರಯೋಗ ಇಲ್ಲಿ ಸಾಕ್ಷಾತ್ಕಾರವಾ
ಆದುಹೃದಯವಂತಿಕೆಗೆ ಮಾತ್ರ ಹೊಳೆಯುತ್ತದೆ. 'ಮಾತು ಮನಂಗಳಿಂದ
ಮೀರಿದ'ಸತ್ಯವಾಗಿ ಬೆಳಗುತ್ತಿದೆ, ಪವಾಡಸದೃಶವಾಗಿ ನಡೆಯುತ್ತಿದೆ, 'ಕಾ
ಅರ್ಥವನ್ನು ಪವಿತ್ರ ತಮಗೊಳಿಸಿದೆ. ಕಾನೂನು, ಕಟ್ಟಳೆ, ನಿಬಂಧನೆಗಳ
ವಿಲ್ಲದೆ ಕೇವಲ ಪ್ರೀತಿಭಕ್ತಿಗಳೇ ಸಾವಿರಾರು ಮುಖದಲ್ಲಿ ಸೇವೆಗೈಯು
ನಿಷ್ಕಾಮ ಸೇವೆ ಸದ್ದು ಗದ್ದಲವಿಲ್ಲದೆ ಇದೆಲ್ಲವನ್ನು ಸಾಧ್ಯಗೈದಿದೆ.

ಸಿದ್ಧಗಂಗಾ

# ಶ್ರೀ ಮದುದ್ದಾನೇಶ್ವರ ಶತಕಂ

ಜಿ. ವಿ. ರಾಜಶೇಖರಯ್ಯ, ನೆಲಮಂಗಲ.

ಬಿಂದು ನಿಗ್ರಹದಿಂದ ಮಾರುತಿ
ಸಿಂಧುವನು ದಾಟಿದನು ಭಾರವ
ನಂದಿಯೆಳೆಯುವನುಳುವ ಬಳಲದೆ ಶಿವನ ಹೊತ್ತಿಹನೂ।
ಹಿಂದೆ ಋಷಿಗಳು ಬಿಂದು ನಿಗ್ರಹ
ದಿಂದ ಬ್ರಹ್ಮವ ಕಂಡರೆಂದಾ
ಬಿಂದು ಮಹಿಮೆಯನೊರೆದ ಉದ್ದಾನೇಶ ದಯವಾಗೈ॥

ಬಿಂದುವೇದೇಹಾದಿ ಶಕ್ತಿಯು
ಬಿಂದುವೇ ಯೋಗಿಗಳ ರತ್ನವು
ಬಿಂದು ನಿಗ್ರಹದಿಂದೆಮುಕ್ತಿ ಮಹತ್ತಿಗಿದೆ ಭಿತ್ತೀ।
ಬಿಂದು ಧಾರಣೆ ಪ್ರಾಣಧಾರಣೆ
ಬಿಂದು ನಾಶನ ಪ್ರಾಣನಾಶನ
ವೆಂದು ವಿರತಿಯ ತುಂಬಿದುದ್ದಾನೇಶ ದಯವಾಗೈ॥

ವಾಸಮಾಡದ ಹೊಸಗೃಹದಿಗ್ರಹ
ವಾಸವಾಗುವ ರೀತಿ ಶರಿರದೊ
ಳಾಸೆಭೂತವು ಮೋಸಕಪಟವು ಮರವೆಗಾರ್ದಭವೂ
ವಾಸಿಸುವ ಮೊದಲೇ ವಿಭೂತಿಯು
ಪೂಸಿಶಿವಲಿಂಗ ಪ್ರತಿಷ್ಠಿಸು
ವೀಶಮಂದಿರ ವೆನಿಸಿದುದ್ದಾನೇಶ ದಯವಾಗೈ॥

ಗುರುವು ಸ್ವರ್ಗದೊಳಾ ಬೃಹಸ್ಪತಿ
ಗುರುವು ಶುಕ್ರಾಚಾರ್ಯ ದೈತ್ಯರಿ
ಗರಿಯೆ ತರುಪಶುಖಗನರರ್ಕಳು ಮೇಟಿಯಾಜ್ಞೆಯೊಳೂ।
ಇರುವವಲ್ಲದೆ ಮರ್ತ್ಯದೊಳಗಿನ
ನರರ ಕರ್ಮವ ಕಳೆವ ಶ್ರೀಗುರು
ಗುರುಮಯವೆ ಜಗವೆಂದ ಉದ್ದಾನೇಶ ದಯವಾಗೈ॥

ಮನವು ಮಾಯದ ಘಾಳಿಯಿಂದಳ
ದಳಗಳೆಂಟರೊಳಾಡಿ ಸೊರಗುವ
ದನುವಿನಿಂದಾವಿರತಿ ಕೇಂದ್ರವಸೇರಿ ಉನ್ಮನಿಯಾ।
ತುಳಿದು ಗುರುಪದ ನೆನೆದು ಮೋಕ್ಷದ
ಘನದಿ ಪರಿಣಮಿಸಿರುವ ಸಿದ್ಧನೆ
ಮನಸಿಜಾಂತಕಜೀಯ ಉದ್ದಾನೇಶದಯವಾಗೈ॥

# ಪರಮ ಪೂಜ್ಯಶ್ರೀ ಶ್ರೀ ಡಾ|| ಶಿವಕುಮಾರಮಹಾ
# ಸ್ವಾಮಿಗಳವರ 83 ನೆ ಜನ್ಮದಿನೋತ್ಸವ ಸಮಾರಂಭ

---

## ಮನವಿ

ಪರಮ ಪೂಜ್ಯ ಶ್ರೀ ಶ್ರೀಗಳವರಿಗೆ 82 ವರ್ಷಗಳು ತುಂಬಿ, 83 ನೆ ವರ್ಷಕ್ಕೆ
ಪಾದಾರ್ಪಣೆ ಮಾಡುತ್ತಿರುವ ಶುಭಸಂದರ್ಭದ ಸವಿಸ್ಮರಣೆಗಾಗಿ, ಕೃತಜ್ಞತಾ
ಪೂರ್ವಕವಾಗಿ ಜನ್ಮದಿನೋತ್ಸವವನ್ನು ಆಚರಿಸಲು ನಾಡಿನ ಅಸಂಖ್ಯಾತ ಭಕ್ತಾದಿ
ಗಳು, ಹಳೆಯ ವಿದ್ಯಾರ್ಥಿಗಳು, ಶ್ರೀ ಸಂಸ್ಥೆಗೆ ಸೇರಿದ ಎಲ್ಲ ಶಿಕ್ಷಣ ಸಂಸ್ಥೆಗಳ
ಉದ್ಯೋಗಿಗಳು, ಅಭಿಮಾನಿಗಳು, ಹಿತೈಷಿಗಳು ಇತ್ತೀಚೆಗೆ ಸಮಾವೇಶಗೊಂಡು
ಏಪ್ರಿಲ್ ಮೊದಲ ಅಥವಾ ಎರಡನೆವಾರದಲ್ಲಿ ಸಮಾರಂಭವನ್ನು ನೆರವೇರಿಸಲು ನಿಣ
ಸಿಯಿರುತ್ತಾರೆ. ಸಮಾರಂಭದ ಮುಖ್ಯ ಅತಿಥಿಗಳನ್ನಾಗಿ ರಾಷ್ಟ್ರಮಟ್ಟದ ಘನತೆವೆತ್ತ
ನಾಯಕರನ್ನು ಆಹ್ವಾನಿಸಲು ಪ್ರಯತ್ನ ನಡೆದಿದೆ. ಹರಗುರು ಚರಮೂರ್ತಿಗಳ
ದಯಮಾಡಿಸಲು ಒಪ್ಪಿರುತ್ತಾರೆ. ಸಮಾಜದ ಎಲ್ಲ ಕ್ಷೇತ್ರಗಳ ಮುಖಂಡರ
ಭಾಗಿಗಳಾಗಲು ಮುಂದೆ ಬಂದಿರುತ್ತಾರೆ. ಸಮಾರಂಭವನ್ನು ಅತ್ಯಂತ ವೈಭವ
ಪೂರ್ಣವಾಗಿ ನಡೆಸಲು ಆಶಿಸಲಾಗಿದೆ.

ಸಮಸ್ತರಿಗೂ ಇದೊಂದು ಪುಣ್ಯಾವಕಾಶ. ಸಮಾರಂಭದ ಯಶಸ್ಸಿ
ಉದಾರವಾಗಿ ಕಾಣಿಕೆಯನ್ನು ನೀಡಿ, ಉತ್ಸವದಲ್ಲಿ ಭಾಗಿಗಳಾಗಿ, ಶ್ರೀಗುರು ಕೃಪೆ
ಪಾತ್ರರಾಗಬೇಕೆಂದು ಕಳಕಳಿಯಿಂದ 'ಸಿದ್ಧಗಂಗಾ' ಮನವಿ ಮಾಡಿಕೊಳ್ಳುತ್ತದ

ಕಾಯಕ ದಾಸೋಹಗಳಿಗೆ ಭಾಷ್ಯವಾದ ಪರಮಪೂಜ್ಯ ಶ್ರೀ ಶ್ರೀಗಳವ
ಜನ್ಮದಿನೋತ್ಸವ ನಿಮ್ಮೆಲ್ಲರ ಅಭಿಮಾನದ ಪವಿತ್ರ ಸಮಾರಂಭವಾಗಲಿ ಎಂ
'ಸಿದ್ಧಗಂಗಾ' ಆಶಿಸುತ್ತದೆ.



## ಪುಣ್ಯಕ್ಷೇತ್ರಗಳು–೧೪. ತಲಕಾಡು

ಪ. ಕೆ ಪಿ. ಶಿವಲಿಂಗಯ್ಯ,
ನಿವೃತ್ತ ಪ್ರಾಂಶುಪಾಲರು. 425/ಎಚ್, ಕುಮಾರನಿಲಯ. ಬೆಂ-40

ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲ್ಲೂಕಿಗೆ ಸೇರಿದ-
ಕ್ಷೇತ್ರವಿದು. ಮೈಸೂರಿಗೆ ಆಗ್ನೇಯ ದಿಕ್ಕಿನಲ್ಲಿ ೨೮ ಮೈಲಿಗಳ ದೂರದಲ್ಲಿ ಕಾವೇರಿ ನದಿಯ ಎಡದಂಡೆಯ ಮೇಲೆ ಇದೆ. ಸಿದ್ಧಾರಣ್ಯಕ್ಷೇತ್ರ, ಗಜಾರಣ್ಯಕ್ಷೇತ್ರ, ದಕ್ಷಿಣ ಕಾಶಿ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿರುವ ಯಾತ್ರಾಸ್ಥಳ. ಕಾವೇರಿ ನದಿಯು ಸಾಮಾನ್ಯವಾಗಿ ಪೂರ್ವಾಭಿಮುಖವಾಗಿ ಹರಿಯುವುದಾದರೂ, ಈ ಕ್ಷೇತ್ರದಲ್ಲಿ ಮಾತ್ರ ನಾಲ್ಕು ದಿಕ್ಕುಗಳಲ್ಲಿಯೂ ಹರಿಯುವುದು ಇಲ್ಲಿನ ಒಂದು ವೈಶಿಷ್ಟ್ಯ. ಗಂಗೆಯು ತುಲಾಮಾಸದಲ್ಲಿ ಇಲ್ಲಿಗೆ ಬಂದು ಕಾವೇರಿಯಲ್ಲಿ ವಾಸಿಸುವಳೆಂದು ಸ್ಥಳಪುರಾಣದಿಂದ ತಿಳಿದು ಬರುತ್ತದೆ. ವೈದ್ಯನಾಥೇಶ್ವರ ದೇವಾಲಯದ ಸಮೀಪದಲ್ಲಿರುವ ಗೋಕರ್ಣ ತೀರ್ಥದಲ್ಲಿ ಪ್ರತಿತುಲಾಮಾಸದ ಆರಂಭದಲ್ಲಿ ಗಂಗೆಯು ಆವಿರ್ಭವಿಸಿ ಮಾಸಾಂತ್ಯದಲ್ಲಿ ಅಂತರ್ಧಾನವಾಗವುದು ಇಂದಿಗೂ ಪ್ರತ್ಯಕ್ಷಪ್ರಮಾಣವಾಗಿರುತ್ತದೆ. ಈತೀರ್ಥದ ಮೃತ್ತಿಕೆಯು ಕುಷ್ಟವೇ ಮೊದಲಾದ ರೋಗಗಳಿಗೆ ದಿವ್ಯೌಷಧಿಯೆಂದು ಪ್ರಸಿದ್ಧಿ ಪಡೆದಿರುತ್ತದೆ.

ಇಲ್ಲಿಗೆ ಸಮೀಪದಲ್ಲಿರುವ ಟಿ. ನರಸೀಪುರವು ತ್ರಿವೇಣಿ ಸಂಗಮಕ್ಷೇತ್ರವಾದ ಪ್ರಯಾಗಕ್ಕೆ ಸಮನಾಗಿದೆ. ಕಾರಣ, ಕಾವೇರಿ-ಕಪಿಲ–ಸ್ಫಟಿಕಸರೋವರಗಳು ಇಲ್ಲಿ ಸಂಗಮಗೊಳ್ಳುವುದು. ಸಮೀಪದ ಇನ್ನೊಂದು ಕ್ಷೇತ್ರವಾದ ಸತ್ಯಗಾಲವು ದಕ್ಷಿಣ ಗಯೆ ಎನಿಸಿದೆ.

ತ್ರೇತಾಯುಗದಲ್ಲಿ ಶ್ರೀ ರಾಮಚಂದ್ರನು ಲಂಕೆಗೆ ಹೋಗುವಾಗ ಇಲ್ಲಿ ತಂಗಿದ್ದ ನೆಂದೂ ಅವನ ಪೂರ್ವಜನಾದ ಸಗರಚಕ್ರವರ್ತಿಯು ಹುಟ್ಟಿದ್ದು ಇಲ್ಲಿಯೇ ಎಂದೂ ಐತಿಹ್ಯವಿದೆ.

**ತಲಕಾಡು ಎಂದು ಹೆಸರುಬರಲು ಕಾರಣ:–**

ಬಹಳ ಪೂರ್ವದಲ್ಲಿ ಸೋಮದತ್ತನೆಂಬ ಬ್ರಾಹ್ಮಣನು ಕಾಶಿಯಲ್ಲಿ ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿದನು. ಪರಮೇಶ್ವರನು ಪ್ರತ್ಯಕ್ಷನಾದನು, ತನ್ನ ಶಿಷ್ಯರ ಸಮೇತ ಕಾಯಸಹಿತ ಕೈಲಾಸಕ್ಕೆ ಹೋಗುವಂತೆ ಕೃಪೆಮಾಡೆಂದನು. ಆಗ ಪರಶಿವನು ತನ ಇಷ್ಟಾರ್ಥಸಿದ್ಧಿಗಾಗಿ ಸಿದ್ಧಾರಣ್ಯಕ್ಷೇತ್ರಕ್ಕೆ ಹೋಗೆಂದನು. ಶಿವಾಜ್ಞೆಯನ್ನ ಕ್ಷಿಸಿ, ಗುರುಶಿಷ್ಯರು ಬರುತ್ತಿರುವಾಗ ಕಾಡಿನದಾರಿಯಲ್ಲಿ ಆನೆಗಳುಇವರನ್ನು ತುಳಿದು ಕೊಂದವು ಸಾಯುವಾಗ ಆನೆಗಳೇ ಅವರ ಮನದಲ್ಲಿರಲಾಗಿ "ಅಂತೇಯಾ ಮತಿಃ ಸಾಗತಿಃ" ಎಂಬ ಉಕ್ತಿಗನುಸಾರವಾಗಿ ಮುಂದಿನ ಜನ್ಮದಲ್ಲಿ ಅವರೆಲ್ಲ ಆನೆಗಳಾಗಿ. ಯೇ ಹುಟ್ಟಿದರು.

ಪರಮೇಶ್ವರನು ಮಣಿಕರ್ಣಿಕೆಯೆಂಬ ದೇವಿಯೊಂದಿಗೆ ಈ ಸಿದ್ಧಾರಣ್ಯಕ್ಷೇತ್ರಕ್ಕೆ ಆಗಮಿಸಿ, ಅಲ್ಲಿನ ಶಾಲ್ಮಲೀ (ಬೂರುಗ) ವೃಕ್ಷವೊಂದರ ಕೆಳಗೆ ನೆಲೆಗೊಂಡನು. ಮಣಿಕರ್ಣಿಕೆಯು ಸರೋವರವಾಗಿ ರೂಪಾಂತರಗೊಳ್ಳಲು "ಗೋಕರ್ಣತೀರ್ಥ ವೆಂದು ಹೆಸರಾಯಿತು. ಇಲ್ಲಿ ಅಲೆದಾಡುತ್ತಿದ್ದ ಆನೆಗಳು ನಿತ್ಯವೂ ಗೋಕರ್ಣ ತೀರ್ಥದಲ್ಲಿ ಮಿಂದು ಅಲ್ಲಿ ಬೆಳೆದಿದ್ದ ಕಮಲ ಪುಷ್ಪಗಳನ್ನು ಕಿತ್ತು ಅಲ್ಲಿನ ಲಿಂಗ ಮೇಲೆ ಭಕ್ತಿಯಿಂದ ಇಡುತ್ತಿದ್ದುವು.

ಅಕಸ್ಮಾತ್ ಅಲ್ಲಿಗೆ ಬಂದ 'ತಲ' ಮತ್ತು 'ಕಾಡ' ಎಂಬ ಇಬ್ಬರು ಬೇಡ ಈ ಕೌತುಕವನ್ನು ಕಂಡು ಆಶ್ಚರ್ಯಭರಿತರಾಗಿ, ಆ ವೃಕ್ಷದಲ್ಲಿ ಏನೋ ವಿಶೇಷವ -ಬೇಕೆಂದು ಭಾವಿಸಿ, ತಮ್ಮ ಕೊಡಲಿಯಿಂದ ಆ ಮರವನ್ನೇ ಕಡಿಯ ತೊಡಗಿದರು ಆಗ ಕೊಡಲಿಯ ಪೆಟ್ಟು ಮರದ ಬುಡದಲ್ಲಿದ್ದ ಶಿವಲಿಂಗಕ್ಕೆ ತಾಕಿ, ರಕ್ತವು ಪ್ರವಹಿಸ ಲಾರಂಭಿಸಿತು. ಅದನ್ನು ಕಂಡ ಆ ಸಹೋದರರು ದಿಗ್ಭ್ರಾಂತರಾದರು. ಆ ಸಮಯದ ಶಿವನೇ ಆ ಮರದ ಎಲೆಗಳನ್ನು ಅರೆದು ಲಿಂಗದ ಗಾಯಕ್ಕೆ ಲೇಪಿಸುವಂತೆ ಹೇಳ ಅವರು ಅದೇ ರೀತಿ ಮಾಡಿದರು. ಆಗ ರಕ್ತ ಸುರಿಯುವುದರ ಬದಲು ಹಾಲು ಸುರಿಯ -ತೊಡಗಿತು. ಪರಶಿವನ ಅಪ್ಪಣೆಯಂತೆ ಆ ಹಾಲನ್ನು ಮಹಾ ಪ್ರಸಾದವೆಂದು ಸೇವಿಸಿದ ಇಬ್ಬರೂ ಶಿವನಲ್ಲೇ ಐಕ್ಯರಾದರು ಹೀಗೆ ಮೋಕ್ಷ ಪಡೆದ 'ತಲ' ಮತ್ತು 'ಕಾಡ' ಇಬ್ಬರ ಹೆಸರೇ ಈ ಪ್ರದೇಶಕ್ಕೆ ನಿಯೋಜಿತವಾಗಿ 'ತಲಕಾಡು' ಎಂದಾಯಿತು

**ಗಜಾರಣ್ಯ ಕ್ಷೇತ್ರ:-** ಎಂದಿನಂತೆ ಶಿವಲಿಂಗಾರ್ಚನೆ ಮಾಡಲು ಬಂದ ಆನೆಗಳ (ಸೋಮದತ್ತ ಮತ್ತವನ ಶಿಷ್ಯರು) ಆ ಹಾಲನ್ನು ಕುಡಿಯಲು ಮತ್ತೆ ಮಾನ ಜನ್ಮತಾಳಿ ಶಿವನನ್ನು ಸ್ತುತಿಸಿ ಸಶರೀರರಾಗಿ ಕೈಲಾಸ ಸೇರಿದರು. ಈ ಕಾರಣದಿಂ ಈ ಸ್ಥಳಕ್ಕೆ 'ಗಜಾರಣ್ಯಕ್ಷೇತ್ರ' ಎಂಬ ಹೆಸರು ಬಂದಿತು.

**ವೈದ್ಯೇಶ್ವರ ದೇವಾಲಯ:-** ಪರಮೇಶ್ವರನು ತನ್ನ ತಲೆಯಲ್ಲಿ ಆದ ಗಾಯಕ್ಕೆ ತಾ ಔಷಧಿ ಸೂಚಿಸಿ ಗುಣಪಡಿಸಿಕೊಂಡದ್ದರಿಂದ 'ವೈದ್ಯೇಶ್ವರ' ಎಂಬ ಹೆಸರುಂಟಾಯಿತು ಈ ದೇವಾಲಯ ಬಹಳ ಸುಂದರವಾಗಿದೆ. ಇದನ್ನು ವಿಜಯನಗರದ ಮಾಧವಮಂ ಕಟ್ಟಿಸಿದನೆಂದು ಹೇಳುತ್ತಾರೆ. ಈ ದೇವಸ್ಥಾನದ ದ್ವಾರಪಾಲಕರು ೧೦ ಅಡಿ ಎತ್ತ -ವಾಗಿದ್ದು ಅತ್ಯಂತ ಸುಂದರ ವಿಗ್ರಹಗಳೆನಿಸಿವೆ. ತೊಡೆಯ ಮೇಲೆ ಶಕ್ತಿ ಕುಳಿತಿರು ಗಣಪತಿ ಅಮೋಘವಾಗಿದೆ. ಈ ಗುಡಿಯ ಹೊರಭಾಗದಲ್ಲಿ ಬೋದಿಗೆಯಿಂ ಜೋತುಬಿದ್ದಿರುವ ಕಲ್ಲಿನ ಸರಪಳಿ ಆಶ್ಚರ್ಯಕರವಾದ ಶಿಲ್ಪಜಾಣ್ಮೆಯನ್ನು ಸೂಚಿಸ ತ್ತದೆ. ಇತರ ಅನೇಕ ದೇವತಾ ವಿಗ್ರಹಗಳ ಜೊತೆಗೆ ಅರ್ಧಕಡೆದಿರುವ ಸುಬ್ರಹ್ಮ (ಕುಮಾರ) ಸ್ವಾಮಿಯ ವಿಗ್ರಹವಿದೆ. ಇಲ್ಲಿ ಸುಂದರವಾದ 'ಮನೋನ್ಮನಿ ಅಂಬ

ವಿಗ್ರಹವು ೫ ಅಡಿ ಎತ್ತರವಿದ್ದು, ನಾಲ್ಕು ಕೈಗಳನ್ನು ಹೊಂದಿದೆ. ಈ ದೇವಸ್ಥಾನದ ಬಳಿ ಗಂಗರ (ತಮಿಳು) ಶಾಸನಗಳಿವೆ. ಲಿಂಗದ ಮೇಲೆ ಕೊಡಲಿಯ ಪೆಟ್ಟಿನ-ಗುರುತನ್ನು ಈಗಲೂ ಕಾಣಬಹುದಾಗಿದೆ. ವೈಶಾಖ ಶುದ್ಧ ಪೌರ್ಣಮಿ ವೈದ್ಯೇಶ್ವರ ದರ್ಶನಕ್ಕೆ ಪ್ರಶಸ್ತವೆಂದು ಇಲ್ಲಿನ ಜನರ ನಂಬಿಕೆ.

ಅರ್ಕೇಶ್ವರ:- ವೈದ್ಯೇಶ್ವರ ದೇವಾಲಯದ ಪೂರ್ವಭಾಗದಲ್ಲಿದೆ, ಸೂರ್ಯದೇವನು ಅರ್ಚಿಸಿದ್ದರಿಂದ 'ಅರ್ಕೇಶ್ವರ' ನೆಂಬ ಹೆಸರು ಬಂದಿದೆ. ಇಲ್ಲಿ ಕಾವೇರಿಯು ಉತ್ತರ-ವಾಹಿನಿಯಾಗಿ ಹರಿಯುತ್ತದೆ.

ಪಾತಾಳೇಶ್ವರ: ವೈದ್ಯೇಶ್ವರನ ದಕ್ಷಿಣ ಭಾಗದಲ್ಲಿ ಮರಳುಗುಡ್ಡೆಯ ಮೇಲಿದೆ. ಆದಿಶೇಷನು ಪೂಜಿಸಿದ ಲಿಂಗವೇ ಪಾತಾಳೇಶ್ವರ ಅಥವಾ ವಾಸುಕೀಶ್ವರ.ಇಲ್ಲಿ ಕಾವೇರಿಯು ಪೂರ್ವವಾಹಿನಿಯಾಗಿ ಹರಿಯುತ್ತದೆ.

ಮರಳೇಶ್ವರ:- ವೈದ್ಯೇಶ್ವರನ ಪಶ್ಚಿಮ ಭಾಗದಲ್ಲಿ ಮರಳು ಗುಡ್ಡೆಯ ಮೇಲಿದೆ. ಬ್ರಹ್ಮದೇವರು ಪೂಜಿಸಿದ ಈ ಶಿವಲಿಂಗವೆ ಮರಳೇಶ್ವರ ಅಥವಾ ಸೈತಕೇಶ್ವರ. ಇಲ್ಲಿ ಕಾವೇರಿಯು ದಕ್ಷಿಣ ವಾಹಿನಿಯಾಗಿ ಹರಿಯುತ್ತದೆ.

ಮಲ್ಲಿಕಾರ್ಜುನೇಶ್ವರ:- ವೈದ್ಯೇಶ್ವರನಿಗೆ ಉತ್ತರದಲ್ಲಿ ತಲಕಾಡಿನಿಂದ ಸು. 3 ಮೈಲಿದೂರದ ಮುಡುಕುತೊರೆಯ ಸುಮಾರು ಮೂನ್ನೂರು ಅಡಿ ಎತ್ತರದ ಸೋಮ-ಪರ್ವತದ ಮೇಲೆ (ಕಾವೇರಿ ನದಿಯು ಪೂರ್ವದಲ್ಲಿ) ಇದೆ ಕಾಮಧೇನುವು ಅರ್ಚಿಸಿದ ಲಿಂಗವೇ ಮಲ್ಲಿಕಾರ್ಜುನೇಶ್ವರ. ಸುಂದರವಾದ ಲಿಂಗದ ತಲೆಯಮೇಲೆ ಕಾಮಧೇನು-ವಿನ ಪಾದಚಿಹ್ನೆಯು ಮುದ್ರಿತವಾಗಿದೆ. ಇಲ್ಲಿನ ಭ್ರಮರಾಂಬಿಕಾ ವಿಗ್ರಹವು ನಯನ-ಮನೋಹರವಾಗಿದ್ದು ಆದಿಶಂಕರಾಚಾರ್ಯರಿಂದ ಪ್ರತಿಷ್ಠಿತವಾದುದೆಂದು ಪ್ರತೀತಿಯಿದೆ ಸ್ಥಾನದ ಮೇಲೆ ಸುಂದರವಾದ ಗೋಪುರ ಮತ್ತು ಪ್ರಾಕಾರದೊಳಗಿನ ಚಿತ್ರಮಂಟ ಪದಲ್ಲಿ ಶೈವ ಪುರಾಣದ ಕಥೆಗಳ ಚಿತ್ರಣ ಕೌತುಕವನ್ನುಂಟು ಮಾಡುವರೀತಿಯಿದೆ. ಇಲ್ಲಿ ಮಾಘಮಾಸದಲ್ಲಿ ನಡೆಯುವ ಜಾತ್ರೆಯಲ್ಲಿನ ರಥೋತ್ಸವ ಮತ್ತು ತೆಪ್ಪೋತ್ಸವ ವರ್ಣನಾತೀತ ಇಲ್ಲಿನ ದನಗಳ ಜಾತ್ರೆ ಕೂಡ ಬಹಳ ಪ್ರಸಿದ್ಧಿ ಪಡೆದಿದೆ.

ಕೀರ್ತಿನಾರಾಯಣಸ್ವಾಮಿ ದೇವಾಲಯ:- ತಲಕಾಡಿನ ಮತ್ತೊಂದು ಪ್ರಸಿದ್ಧ ದೇವಾಲಯ ಇದು. ಹೊಯ್ಸಳ ವಿಷ್ಣುವರ್ಧನನು ಚೋಳರಿಂದ ತಲಕಾಡನ್ನು ವಶ-ಪಡಿಸಿ ಕೊಂಡುದರ ಸ್ಮಾರಕವಾಗಿ ಕ್ರಿ. ಶ. ೧೧೧೭ ರಲ್ಲಿ ಈ ದೇವಸ್ಥಾನವನ್ನು ಕಟ್ಟಿಸಿದನು. ಈ ಗುಡಿಯಲ್ಲಿ ಎತ್ತರವಾದ ವೇದಿಕೆಯ ಮೇಲೆ ಭವ್ಯವಾದ ೮ ಅಡಿ ಎತ್ತರದ 'ಕೀರ್ತಿನಾರಾಯಣ' ವಿಗ್ರಹವು ನಿಂತಿದೆ. ವಿಗ್ರಹದ ಸುತ್ತಲೂ ಇರುವ

ಕಲ್ಲಿನ ಪ್ರಭಾವಳಿಯಲ್ಲಿ ದಶಾವತಾರ ವಿಗ್ರಹಗಳ ಕೆತ್ತನೆಯು ಅತ್ಯಂತ ಮನೋಹರ-ವಾಗಿದೆ. ಕಂಬಗಳಲ್ಲಿನ ಕುಸುರಿ ಕೆಲಸ, ಜಳ್ಳಿಗಳ ನಕ್ಷೆ, ಮೇಲ್ಛಾವಣಿಯ ಕೆತ್ತನೆ-ದೇವಶಿಲ್ಪಿ ವಿಶ್ವಕ್ಸೇನನ ವಿಗ್ರಹವೂ, ರಮ್ಯವಾಗಿದೆ. ನವರಂಗದಲ್ಲಿ ಶ್ರೀರಾಮಾನುಜಾ-ಚಾರರ‍್ಯ ವಿಗ್ರಹವೂ ಭಕ್ತೋತ್ತಮರಾದ ಲೋಕಾಚಾರ್ಯ-ಶಠಕೋಪರ ವಿಗ್ರಹಗಳೂ ಇವೆ. ಉತ್ತರದಬಾಗಿಲನ್ನು, ಸ್ವರ್ಗದ ಬಾಗಿಲು, ಎನ್ನುವರು. ಸುಂದರನಾಯಕಿ ಅಮ್ಮನವರೇ ಇಲ್ಲಿನ ದೇವಿ.

**ಆನಂದೇಶ್ವರ ಮತ್ತು ಗೌರೀಶಂಕರ ದೇವಾಲಯಗಳು:-** ಆನಂದೇಶ್ವರ ದೇವಾಲಯದಲ್ಲಿದ್ದ 'ಚಿದಾನಂದ'ರೆಂಬ ಸಂತರು ಬಾಳೆ ಎಲೆಯ ಮೇಲೆ ಕುಳಿತು ಕಾವೇರಿ ಪ್ರವಾಹವನ್ನು ದಾಟಿದರು. ಅದನ್ನು ಕಣ್ಣಾರೆಕಂಡ ಹೈದರಾಲಿಯು ಆನಂದೇಶ್ವರ ದೇವಸ್ಥಾನಕ್ಕೆ ಉಂಬಳಿ ಬಿಟ್ಟನೆಂದು ತಿಳಿದುಬರುತ್ತದೆ.

ಗೌರೀಶಂಕರ ದೇವಾಲಯವು ಚಿಕ್ಕದೇವರಾಜ ಒಡೆಯರ ಕಾಲದ್ದು. ಇಷ್ಟು ದೇವಾಲಯಗಳು ಮಾತ್ರವಲ್ಲದೆ, ಈ ಕ್ಷೇತ್ರದಲ್ಲಿ ಚಾಮುಂಡೇಶ್ವರಿ, ಗೋಕರ್ಣೇಶ್ವ ವೀರಭದ್ರ, ವಿಷಪರಿಹಾರೇಶ್ವರ, ವೈಕುಂಠನಾರಾಯಣ ಸ್ವಾಮಿ ದೇವಾಲಯಗಳೂ ಇವೆ.

**ವೀರಶೈವ ಮಠಗಳು:-** ತಲಕಾಡು ಮೂಲತಃ ಪುಣ್ಯಕ್ಷೇತ್ರ ಎಂಬುದಕ್ಕೆ ಇಲ್ಲಿ ವೀರಶೈವ ಮಠಗಳಿರುವುದೇ ಸಾಕ್ಷಿ. ಅವುಗಳಲ್ಲಿ ಹಸ್ತಿಕೇರಿಮಠ ಪ್ರಸಿದ್ಧವಾದುದು. ಇಲ್ಲಿ ಸ್ವಾಮಿಗಳವರು ವಿಷಪರಿಹಾರ ಕಾರ್ಯವನ್ನು ವಿಧ್ಯುಕ್ತವಾಗಿ ಕೈಗೊಂಡು ಅನೇಕ ಜನರ ಪ್ರಾಣವನ್ನು ಉಳಿಸಿರುತ್ತಾರೆ. ಇತ್ತೀಚೆಗಂತೂ ಆದೊಂದು ಪ್ರಯೋಗ ಶಾಲೆಯಾಗಿಯೇ ಏರ್ಪಟ್ಟಿರುವುದು ನಾಡಿನ ಸುದೈವ. ಈ ಮಠದ ಪಕ್ಕದಲ್ಲೇ ೧೦೧ ಲಿಂಗಗಳನ್ನು ವರ್ತುಲಾಕಾರದಲ್ಲಿ ಪ್ರತಿಷ್ಠಾಪಿಸಿ, ದೇವಾಲಯವನ್ನು ಕಟ್ಟಿರುತ್ತಾರೆ.

**ಕೊಪ್ಪಳ ಮಠ:-** ಸ್ಮಾರ್ತಸಂಪ್ರದಾಯದ ಕೊಪ್ಪಳ ಮಠದಲ್ಲಿ ಗೋಪಾಲಕೃಷ್ಣ ಪೂಜೆನಡೆಯುತ್ತದೆ.

ತಲಕಾಡಿನ ಉತ್ತರದ ಬಾಗಿಲಿನಲ್ಲಿ ಮಹಾಗಣಪತಿ ಮತ್ತು ಗ್ರಾಮದೇವ ಬಂಡರಸಮ್ಮ (ಸಪ್ತಮಾತೃಕೆಮರ) ದೇವಸ್ಥಾನವಿದೆ. ಇಲ್ಲಿಯೂ ಮಾಘಮಾಸದ ಜಾತ್ರೆ ನಡೆಯುತ್ತದೆ.

**ಚಾರಿತ್ರಿಕ ಹಿನ್ನೆಲೆ:-** ಗಂಗರು, ಚಾಲುಕ್ಯರು, ಚೋಳರು ಮತ್ತು ಹೊಯ್ಸ ರಾಜರುಈ ರಾಜಧಾನಿಯಿಂದ ಆಡಳಿತ ನಡೆಸಿದರು.

ಕ್ರಿ.ಶ. ೩ನೆಯ ಶತಮಾನದಲ್ಲಿ ಗಂಗರಸರ ರಾಜಧಾನಿಯಾಗಿ 'ದಲಿವನಪುರ' ಎಂಬ ಹೆಸರನ್ನು ಪಡೆಯಿತು. ೫ನೆಯ ಶತಕದಲ್ಲಿ ಗಂಗರಾಜ ಹರಿವರ್ಮನ ಕಾಲದಲ್ಲಿ 'ವಾದಿಮದಗಜೇಂದ್ರ' ಎಂದು ಬಿರುದಾಂಕಿತ ಬೌದ್ಧ ಸನ್ಯಾಸಿಯು ಮಾಧವ ಭಟ್ಟನೆಂಬ ವಿದ್ವಾಂಸನಿಂದ ವಾದದಲ್ಲಿ ಸೋತು ಹೋದನು. ಆಗ ರಾಜನು ಮಾಧವ ಭಟ್ಟನಿಗೆ 'ವಾದೀಭ ಸಿಂಹ' ಎಂಬ ಬಿರುದನ್ನಿತ್ತು ಮೈಸೂರು ಬಳಿಯ ಓಲೆಕೋಡು ಎಂಬ ಗ್ರಾಮವನ್ನು ದಾನವಾಗಿಕೊಟ್ಟನೆಂದು ಶಾಸನಗಳು ಸಾರುತ್ತಿವೆ. ೬ನೆಯ ಶತಮಾನದ ದುರ್ವಿನೀತ ರಾಜನು ಸ್ವತಃ ವಿದ್ವಾಂಸನಾಗಿದ್ದು ಗ್ರಂಥರಚನೆ ಮಾಡಿ ಎಲ್ಲ ಮತಗಳ ಕವಿಗಳಿಗೂ ಆಶ್ರಯಕೊಟ್ಟಿದ್ದನು. ಮಹಾಕವಿ ಭಾರವಿಯು ಇವನ ಆಸ್ಥಾನ ಕವಿಯಾಗಿದ್ದನು. ಕ್ರಿ.ಶ. ೭ನೆಯ ಶತಮಾನದಲ್ಲಿ ಗಂಗರಸ ಶ್ರೀ ಪುರುಷನು ದಕ್ಷಿಣ ಭಾರತದ ರಾಜರುಗಳನ್ನು ಸಂಘಟಿಸಿದನು. ನೆಲಮಂಗಲ ತಾಲ್ಲೂಕಿನ ತ್ಯಾಮಗೊಂಡ್ಲು ಸಮೀಪದಲ್ಲಿರುವ 'ಮಾನ್ಯಪುರ' (ಈಗಿನ ಮಣ್ಣೆ) ವನ್ನು ಉಪ-ರಾಜಾಧಾನಿಯನ್ನಾಗಿ ಮಾಡಿಕೊಂಡು ಅಲ್ಲಿಂದಲೂ ರಾಜ್ಯಾಡಳಿತ ನಡೆಸಿದ ಕೀರ್ತಿ ಶ್ರೀ ಪುರುಷನದು. ಈತನು ಚಾಳುಕ್ಯರನ್ನು ಸೋಲಿಸಿದನು. ತಲಕಾಡನ್ನು ಅತ್ಯುನ್ನತ ಸ್ಥಿತಿಗೆ ತಂದನು.

ಕ್ರಿ. ಶ. ೮ನೆಯ ಶತಮಾನದಲ್ಲಿ ಶ್ರೀ ಪುರುಷನ ಜ್ಯೇಷ್ಠಪುತ್ರ ಸೈಗೊಟ್ಟ ಶಿವಮಾರನು ರಾಷ್ಟ್ರಕೂಟರಿಂದ ಪರಾಜಿತನಾದರೂ, ಪುನಃ ಆಡಳಿತಸೂತ್ರವನ್ನು ಕೈಗೆತ್ತಿ ಕೊಂಡು ರಾಜ್ಯಾಭಿವೃದ್ಧಿ ಕಾರ್ಯಗಳನ್ನು ಮಾಡಿದನು. ಎಲ್ಲ ಧರ್ಮೀಯರನ್ನೂ ಸಮನಾಗಿ ಕಂಡ ಪ್ರಭು ಇವನು.

೯ನೆಯ ಶತಮಾನದಲ್ಲಿ ರಾಚಮಲ್ಲಸತ್ಯವಾಕ್ಯನು ಚಾಲುಕ್ಯರನು ಕ್ರಿ.ಶ. ೮೭೮ರಲ್ಲಿ ಎರೆಯಗಂಗನು ರಾಷ್ಟ್ರಕೂಟರನ್ನು ಸೋಲಿಸಿದುದು ಹೆಮ್ಮೆಯ ಸಂಗತಿ. ಈ ಕಾಲದಲ್ಲಿಯೇ ಗಂಗರಾಜರ ಪ್ರಖ್ಯಾತ ದಂಡನಾಯಕನೆನಿಸಿದ ಚಾವುಂಡರಾಯನು ಸಾಹಿತ್ಯ ರಚನೆ ಮಾಡಿದ್ದಲ್ಲದೆ ವಿಶ್ವವಿಖ್ಯಾತ 'ಗೋಮಟೇಶ್ವರ' ಸ್ವಾಮಿಯ ಮಹಾಮೂರ್ತಿಯನ್ನು ಶ್ರವಣಬೆಳಗೊಳದಲ್ಲಿ, ನಿರ್ಮಿಸಿ ಶಾಶ್ವತ ಕೀರ್ತಿಯನ್ನು ಪಡೆದನು, ೧೦ ನೆಯಶತಕದಲ್ಲಿ ಇಮ್ಮಡಿ ಬೂತುಗ ಮತ್ತು ಮಾರಸಿಂಹರು ಪ್ರಖ್ಯಾತರಾಜರೆನಿಸಿದ್ದರು,

ಕ್ರಿ. ಶ. ೧೦೦೪ ರಲ್ಲಿ ರಾಜೇಂದ್ರ ಚೋಳನು ತಲಕಾಡನ್ನು ವಶಪಡಿಸಿಕೊಂಡು ಅದಕ್ಕೆ 'ರಾಜ ರಾಜಪುರ' ವೆಂದು ಹೆಸರಿಟ್ಟನು, ಆದರೆ ಚೋಳರು ೧೧೧೭ ರಲ್ಲಿ ವಿಷ್ಣುವರ್ಧನನಿಗೆ ಸೋತುಹೋದರು, ಕಾವೇರಿನದಿಯ ಮತ್ತೊಂದುದಡದಲ್ಲಿರುವ ಮಾಲಿಂಗಿಗೆ, ಜನನಾಥಪುರ, ಎಂದು ಹೆಸರಾಯಿತು. ಮುಂದೆ ೧೪ ನೆಯ ಶತಮಾನದಲ್ಲಿ ಈ ಊರು ವಿಜಯನಗರ ಸಾಮಂತರ ಕೈಸೇರಿತು.

ಕ್ರಿ. ಶ. ೧೬೩೪ ರಲ್ಲಿ ಶ್ರೀರಂಗಪಟ್ಟಣದಲ್ಲಿ ವಿಜಯನಗರದ ಪ್ರತಿನಿಧಿಯಾಗಿದ್ದ ತಿರುಮಲರಾಯನಿಗೆ ( ಶ್ರೀ ರಂಗರಾಯ ಎಂದೂ ಹೇಳುವುದುಂಟು ) ಬೆನ್ನುಪಣ ಖಾಯಿಲೆಯಾಗಿ ಮೈಸೂರು ರಾಜಒಡೆಯರಿಗೆ ಶ್ರೀ ರಂಗಪಟ್ಟಣವನ್ನು ಒಪ್ಪಿಸಿ ಪತ್ನಿ ಅಲಮೇಲಮ್ಮನವರೊಂದಿಗೆ ತಲಕಾಡಿನ ಬಳಿಯಿರುವ ಮಾಲಂಗಿಗೆ ಬಂದು ಸ್ವಲ್ಪ ಕಾಲವಲ್ಲಿಯೇ ದಿವಂಗತನಾದನು. ಹೀಗೆ ವಿಜಯನಗರದ ರತ್ನಸಿಂಹಾಸನವು ಮೈಸೂರರಸರ ಕೈಸೇರಿದಂತಾಯಿತು. ತಲಕಾಡು ಸಹಿತ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಯಿತು.

**ಅಲಮೇಲಮ್ಮನವರ ಶಾಪ:-** ಅಲಮೇಲಮ್ಮನವರು ಶ್ರೀರಂಗಪಟ್ಟಣದಲ್ಲಿದ್ದಾಗ ತಮ್ಮಲ್ಲಿದ್ದ ಮುತ್ತಿನ ಮೂಗತಿ ಮತ್ತು ಇತರ ಬೆಲೆಬಾಳುವ ಆಭರಣಗಳನ್ನು ಶ್ರೀರಂಗಪಟ್ಟಣದಲ್ಲಿರುವ ಶ್ರೀರಂಗನಾಯಕಿ ಅಮ್ಮನವರಿಗೆ ವಿಶೇಷದಿನಗಳಲ್ಲಿ ಅಲಂಕಾರಕ್ಕಾಗಿ ಕೊಟ್ಟು ಮತ್ತೆ ಅವನ್ನು ಹಿಂದಕ್ಕೆ ತರಿಸಿಕೊಳ್ಳುತ್ತಿದ್ದರು. ಅವರು ಮಾಲಂಗಿಗೆ ಹೋದಾಗ ಆಭರಣಗಳನ್ನು ತಮ್ಮೊಂದಿಗೆ ತೆಗೆದುಕೊಂಡು ಹೋಗಿದ್ದರು. ಆ ವಿಷಯವನ್ನು ತಿಳಿದು ರಾಜಒಡೆಯರು ಅಮ್ಮನವರ ಅಲಂಕಾರಕ್ಕಾಗಿ ಆ ಒಡವೆಗಳನ್ನು ಕೊಡಲೇಬೇಕೆಂದು ತಾಕೀತುಮಾಡಿ ಚರರನ್ನು ಕಳುಹಿಸಿದಾಗ, ಕುಪಿತ-ರಾದ ಅಲಮೇಲಮ್ಮನವರು ಮೂಗುತಿಯೊಂದನ್ನು ಕೊಟ್ಟು ಉಳಿದ ಆಭರಣ-ಗಳನ್ನು ಸೆರಗಿನಲ್ಲಿಕಟ್ಟಿಕೊಂಡು “ ತಲಕಾಡು ಮರಳಾಗಲಿ, ಮಾಲಂಗಿ ಮಡುವಾ-ಗಲಿ, ಮೈಸೂರುದೊರೆಗಳಿಗೆ ಮಕ್ಕಳೇ ಇಲ್ಲದೆ ಹೋಗಲಿ” ಎಂದು ಶಪಿಸುತ್ತಾ ಮಾಲಂಗಿ ಮಡುವಿನಲ್ಲಿ ಬಿದ್ದರೆಂದು ಐತಿಹ್ಯವಿದೆ.

ಈ ಧಾರುಣವಾರ್ತೆಯನ್ನು ಕೇಳಿದ ರಾಜ ಒಡೆಯರು ಮಮ್ಮಲ ಮರುಗಿ-ದರು. ಅದೇರಾತ್ರಿ ಅಲಮೇಲಮ್ಮನವರು ಮಹಾರಾಜರ ಸ್ವಪ್ನದಲ್ಲಿ ಪ್ರತಿಬಂಧರೂಪದಲ್ಲಿ ಕಾಣಿಸಿಕೊಳ್ಳಲು, ಕೂಡಲೇ ದೊರೆಗಳು ಸಕುಟುಂಬಿಗಳಾಗಿ ಅಲಮೇಲಮ್ಮನವರ ಪ್ರತಿಮೆಯನ್ನು ಮಾಡಿಸಿ ನಿತ್ಯ ಪೂಜಾಕಟ್ಟಳೆಯನ್ನು ಪ್ರಾರಂಭಿಸಿದ್ದಲ್ಲದೆ ಪ್ರತಿವರ್ಷ ನವರಾತ್ರಿಯ ಮಹಾನವಮಿಯದಿವಸ ರಾತ್ರಿಅರಮನೆಯಲ್ಲಿ ವಿಶೇಷಪೂಜೆಸಲ್ಲಿಸಲು ಸಂಕಲ್ಪಿಸಿ ಅಂತೆಯೆ ಆಚರಿಸತೊಡಗಿದರು.

**ಅವಲುದೇವತೇ ಪೂಜೆ:-** ಶ್ರೀ ಜಯಚಾಮರಾಜೇಂದ್ರ ಒಡೆಯರ ಅವಧಿಯಲ್ಲಿ ದಸರ ಉತ್ಸವದ ಮಹಾನವಮಿ ರಾತ್ರಿ ಅರಮನೆಯಲ್ಲಿ ಸಕುಟುಂಬ ಪರಿವಾರವಾಗಿ ಅಲಮೇಲಮ್ಮನವರ ಪ್ರತಿಮೆಗೆ ಪೂಜೆಯನ್ನು ಸಲ್ಲಿಸುವ ಪರಿಪಾಟು ಇಟ್ಟುಕೊಂಡಿದ್ದರು ಆದಕ್ಕಾಗಿ ಅವಲುದೇವತೆ ಪೂಜೆಯೆಂದು ಕರೆಯುತ್ತಾರೆ.

**ಮರಳು ಮಯ:-** ಈ ಪ್ರದೇಶದಲ್ಲಿ ಕಾವೇರಿ ನದಿಯು ತಂದುಎರೆಚಿದ ಮರಳಿನಲ್ಲಿ ಹಳೆಯ ತಲಕಾಡು ಊರು ಮತ್ತು ಮೂವತ್ತಾರು ದೇವಸ್ಥಾನಗಳು ಹೂತು ಹೋಗಿವೆಯೆಂದು ಹೇಳುತ್ತಾರೆ.

**ಮಾಧವ ಮಂತ್ರಿ ಅಣೆಕಟ್ಟು:-** ತಲಕಾಡಿನ ಸಮೀಪದಲ್ಲಿ ಕಾವೇರಿ ನದಿಗೆ ವಿಜಯನಗರದ ಅರಸರ ಮಂತ್ರಿಯಾಗಿದ್ದ ಮಾಧವಾಚಾರ್ಯರು ಒಂದು ಅಣೆ-ಕಟ್ಟನ್ನು ಕಟ್ಟಿಸಿ, ಸುತ್ತಮುತ್ತಲ ಪ್ರದೇಶವು ವ್ಯವಸಾಯಕ್ಕೆ ಯೋಗ್ಯವಾಗು ವಾಗುವಂತೆ ಮಾಡಿರುತ್ತಾರೆ. ಇದರ ಸಮೀಪದಲ್ಲೇ ಪುರಾತನವಾದ ಮಾಧವ-ಸ್ವಾಮಿಯ ದೇವಾಲಯವಿದೆ.

**ಪಂಚಲಿಂಗದರ್ಶನ:-** ಕಾರ್ತಿಕಮಾಸ, ವೃಶ್ಚಿಕಮಾಸ, ಅಮಾವಾಸ್ಯೆ, ಸೋಮವಾರ, ಕುಹೂ ಮತ್ತು ವಿಶಾಖ ನಕ್ಷತ್ರ ಯೋಗಗಳು ಕೂಡಿಬಂದಾಗ ಅನೇಕ ವರ್ಷಗಳಿಗೊಮ್ಮೆ ಪಂಚಲಿಂಗಗಳನ್ನು ಒಂದೇ ದಿವಸ ನೋಡಲು ಅವಕಾಶವಿರುತ್ತದೆ. 1908-ಕೀಲಕ, 1915-ರಾಕ್ಷಸ, 1925-ಕ್ರೋಧನ, 1938 ಬಹುಧಾನ್ಯ, 1952-ನಂದನ, 1959-ಶಾರ್ವರಿ, 1966-ಪರಾಭವ, 1979-ಸಿದ್ಧಾರ್ಥಿ ಸಂವತ್ಸರಗಳಲ್ಲಿ ಪಂಚಲಿಂಗದರ್ಶನವು ಸಂಭವಿಸಿರುವುದು. ಆಗ ಮರಳನ್ನೆಲ್ಲಾ ತೆಗೆದು ಎಲ್ಲ ದೇವಾಲಯಗಳಲ್ಲಿಯೂ ಪೂಜಾದಿಗಳು ನಡೆಯುವಂತೆ ವ್ಯವಸ್ಥೆ ಮಾಡಲಾಗುವುದು ಭಾರತದ ಅನೇಕ ಪುಣ್ಯ ಕ್ಷೇತ್ರಗಳಲ್ಲಿ 'ತಲಕಾಡು' ಒಂದು.

---

## ಬುದ್ಧಿಯ ಇಂಜಕ್ಷನ್ ಮಾರುಕಟ್ಟೆಯಲ್ಲಿ !

ಸಂಗ್ರಹ:- ಬಿ. ಸುಬ್ರಾಯ ಅಡಿಗರು, ನಿವೃತ್ತ ಉಪಾಧ್ಯಾಯರು ಸಂಡೂರು, ಬಳ್ಳಾರಿ-ಜಿಲ್ಲೆ.

ಇನ್ನು ಮೂರ್ಖರೂ ಬುದ್ಧಿವಂತರಾಗಬಲ್ಲರು......ಹೌದು.......ತಿಳಿಗೇಡಿಗಳೂ ಬುದ್ಧಿಯ ಇಂಜೆಕ್ಷನ್ ಪಡೆದು ಬುದ್ಧಿವಂತರೆನಿಸುವ ಕಾಲ ದೂರವಿಲ್ಲವೆಂದು ವಿಜ್ಞಾನಿಗಳೀಗ ಹೇಳುತ್ತಿದ್ದಾರೆ. ಮಂದ ಬುದ್ಧಿಯ ವಿದ್ಯಾರ್ಥಿಗಳಿಗೆ ಇದು ನಿಜಕ್ಕೂ ಸಂತೋಷದ ಸುದ್ದಿ.

ಅಮೇರಿಕೆಯ ಟೆಕ್ಸಾಸ್‌ದಲ್ಲಿನ ಬೆಯಲರ್ ವಿಶ್ವವಿದ್ಯಾಲಯದ ಮೆಡಿಕಲ್ ಕಾಲೇಜಿನ ಇಬ್ಬರು ಡಾಕ್ಟರರು ಇತ್ತೀಚೆಗೆ ವಿಚಿತ್ರ ಪ್ರಯೋಗವೊಂದನ್ನು ನಡೆಸಿದರು. ಅವರು ಇಲಿಗಳ ಹಲವು ಸಮೂಹಗಳನ್ನು ಏರ್ಪಡಿಸಿ, ಅವಕ್ಕೆ ಬೇರೆ ಬೇರೆ ವಿದ್ಯೆಗಳಲ್ಲಿ ತರಬೇತಿ ನೀಡಿದರು. ತರಬೇತಿಯ ತರುವಾಯ ಆ ಇಬ್ಬರು ವಿಜ್ಞಾನಿಗಳು ಆ ಇಲಿಗಳ ಮೆದುಳಿನ ಸಾರ ತೆಗೆದು ತರಬೇತಿ ಪಡೆಯದ ಇಲಿಗಳ ಮೆದುಳಿಗೆ ಹಾಕಿದರು. ಈಗ ಈ ತರಬೇತಿಯಿಲ್ಲದ ಇಲಿಗಳುಕೂಡ ಆ ಇಂಜೆಕ್ಷನ್ ಪ್ರಭಾವದಿಂದ ಸಂಬಂಧಪಟ್ಟ ವಿದ್ಯೆಯಲ್ಲಿ ಸಹಜವಾಗಿಯೇ ನಿಪುಣವಾದವು.

ಈ ವಿಧಾನ ಮನುಷ್ಯರಿಗೂ ಅನ್ವಯಿಸಬಹುದೆಂದು ವಿಜ್ಞಾನಿಗಳ ಹೇಳಿಕೆ. ಅಂದರೆ ಇನ್ನು ಮುಂದೆ ಬುದ್ಧಿವಂತ ಮನುಷ್ಯನೊಬ್ಬ ಸಾಯುತ್ತಲೇ ಅವನ ಮೆದುಳಿನ ಸಾರವನ್ನು ಒಂದು ಸೀಸೆಯೊಳಗೆ ತುಂಬಿಸಲಾಗುವುದು. ಸೀಸೆಯ ಮೇಲೆ ಆ ವಿದ್ವಾಂಸನ ಹೆಸರು ಹಾಗೂ ಅವನ ವಿಶಿಷ್ಟ ವಿದ್ಯೆಯ ಉಲ್ಲೇಖ ಇರುವುದು. ಆ ಬಳಿಕ ಔಷಧ ಕಂಪನಿಗಳು ಈ ಸಾರದಿಂದ ಇಂಜೆಕ್ಷನ್ ತಯರಿಸಿ ಮಾರುಕಟ್ಟೆಗೆ ಕಳುಹಿಸುವುವು ಅನಂತರ ಯಾರಿಗೆ ಯಾವ ಜ್ಞಾನ ಬೇಕೋ ಅವರು ಅದಕ್ಕೆ ಸಂಬಂಧಪಟ್ಟ ಇಂಜೆಕ್ಷನ್ ಹಾಕಿಸಿಕೊಂಡು ವಿದ್ಯೆಯ ಪೂರ್ತಿಜ್ಞಾನಪಡೆಯುವರು, ಅವರು ಆ ವಿದ್ಯೆಯಲ್ಲಿ ಪೂರ್ಣ ಪಾರಂಗತರೆನಿಸುವರು.

ನಮ್ಮ ಮೆದುಳಿನಲ್ಲಿ ಜ್ಞಾನಸಂಗ್ರಹಕ್ಕಾಗಿ ಸಣ್ಣ ಸಣ್ಣ ಕೋಶಗಳಿರುತ್ತವೆ. ಅವುಗಳಲ್ಲಿ ಜ್ಞಾನ ಸುರಕ್ಷಿತವಾಗಿರುತ್ತದೆ. ಈ ಸಿದ್ಧಾಂತದ ಮೇರೆಗೆ, ಈಕೋಶಗಳಲ್ಲಿ ಅಗತ್ಯವಿದ್ದ ಜ್ಞಾನದ ಅಣುಗಳ ಇಂಜೆಕ್ಷನ್ ಕೊಟ್ಟು ಅಜ್ಞಾನಾಂಧಕಾರವನ್ನು ದೂರಗೊಳಿಸಬಹುದು.

ಅಮೇರಿಕೆಯ ಇನ್ನೊಬ್ಬ ವಿಜ್ಞಾನಿ “ಜಿಮ್ಮಿ ಈ ಕುವೋನ್”ನ ಪ್ರಕಾರ ಮನುಷ್ಯನ ಮೆದುಳಿನ ಜ್ಞಾನಭಂಡಾರದ ಕಾರ್ಯ ಶಕ್ತಿ ಅವನ ಮೆದಳಿನ ರಂಧ್ರಗಳಲ್ಲಿ ಆರ್. ಎನ್. ಎ. (ರೈಬೋ ನೂಕ್ಲಿಕ್ ಆ್ಯಸಿಡ್)ಯ ಪ್ರಮಾಣವನ್ನವಲಂಬಿಸಿರುತ್ತದೆ. ಮಸ್ತಿಷ್ಕರಂಧ್ರಗಳಲ್ಲಿ ಆರ್. ಎನ್. ಎ. ಪ್ರಮಾಣ ಹೆಚ್ಚಾದಂತೆ, ವ್ಯಕ್ತಿ

ಹೆಚ್ಚು ವಿದ್ವಾಂಸನಾಗುವ, ಮತ್ತು ಅವನ ಸ್ಮರಣಶಕ್ತಿಯೂ ಪ್ರಖರವಾಗುವುದು. ಶಿಕಾಗೋವಿಶ್ವವಿದ್ಯಾಲಯದ ಡಾ. ಸಿಡ್ನಿಶುಲ್ಮನ್ ಹಾಗೂ ಮಿಶಿಗನ್ ವಿಶ್ವವಿದ್ಯಾಲಯದ ಮನೋವಿಜ್ಞಾನಿ ಡಾ. ಜೇಮ್ಸ್ ಬೀ ಮೆಕ್ಕೋನೆಲ್ ಕೂಡ ಈ ಸಿದ್ಧಾಂತವನ್ನು ಸಮರ್ಥಿಸಿದ್ದಾರೆ.

ಪ್ರಾಣಿಗಳ ಮೇಲೆ ನಡೆಸಿದ ಪ್ರಯೋಗಗಳೂ ಈ ಸಿದ್ಧಾಂತವನ್ನು ಪುಷ್ಟೀಕರಿಸಿವೆ. ಕೆಲವು ಪ್ರಯೋಗಗಳಲ್ಲಿ ಕೋತಿಗಳ ಮೆದುಳಿಗೆ ಆರ್.ಎನ್.ಎ ಯನ್ನು ಹೆಚ್ಚು ಪ್ರಮಾಣದಲ್ಲಿ ಹಾಕಿದಾಗ ಇತರ ಕೋತಿಗಳಿಗಿಂತ ಅವುಗಳ ಜಾಣ್ಮೆ ಹೆಚ್ಚಿದುದು ಕಂಡುಬಂತು. ಇದೇ ರೀತಿ ದಡ್ಡರಿಗೆ ಆರ್.ಎನ್.ಎ. ಚುಚ್ಚುಮದ್ದು ಕೊಟ್ಟರೆ, ಅವರು ಮೊದಲಿಗಿಂತ ತೀವ್ರ ಬುದ್ಧಿಯುವರಾಗುವರೆಂದು ಈ ವಿಜ್ಞಾನಿಗಳ ಹೇಳಿಕೆ.

ಈ ಎಲ್ಲ ಪ್ರಯೋಗಗಳು ಇನ್ನೂ ಪ್ರಯೋಗಶಾಲೆಗಳಲ್ಲೇ ನಡೆಯುತ್ತಲಿವೆ. ಇವು ಸಫಲವಾದುವೆಂದರೆ ಮುಂದೆ 'ಬುದ್ಧಿ' ಶಬ್ದದ ಮೇಲೆ ಬುದ್ಧಿವಂತರ ಏಕಾಧಿಕಾರ ಕೊನೆಗೊಳ್ಳುವುದು. ಆಗ ಪ್ರತಿಯೊಬ್ಬನೂ ವಿದ್ವಾಂಸನೆನಿಸುವನು. ಆಗ ವಿದ್ಯಾರ್ಥಿಗಳಿಗೆ ಪಾಠ ಕಲಿಯಲು ಶಾಲಾ ಕಾಲೇಜುಗಳು ಇರುವುವೋ ಇಲ್ಲವೋ ಆದಾರು ಬಲ್ಲ! ಏಕೆಂದರೆ ಕಲಿಯಬೇಕಾದುದನ್ನೆಲ್ಲ ಅವರು ಇಂಜಕ್ಷನ್ ಮೂಲಕ ಬಹು ಸುಲಭವಾಗಿ ಪಡೆದು ಕೊಳ್ಳುವರು. ಆ ವೇಳೆ ಬಹುಶಃ ವಿದ್ಯಾರ್ಥಿಗಳು ಶಾಲೆಯ ಬದಲು ಆಸ್ಪತ್ರೆಗೆ ಹೋಗಬೇಕಾಗುವುದು. ಅಲ್ಲಿ ಅಧ್ಯಾಪಕರ ಸಲಹೆ ಸೂಚನೆಗಳಂತೆ ಡಾಕ್ಟರರು ಬುದ್ಧಿಯ ಇಂಜೆಕ್ಷನ್ ಚುಚ್ಚುವರು!

---

೧. ಅಂತರಂಗದೊಳಗಿರ್ದ ನಿರವಯಲಿಂಗವನು ಸಾವಯಲಿಂಗವ ಮಾಡಿ,
ಶ್ರೀ ಗುರುಸ್ವಾಮಿ ಕರಸ್ಥಲಕ್ಕೆ ತಂದು ಕೊಟ್ಟ ಇಷ್ಟ ಲಿಂಗವು
ಅಂತರಂಗವನಾವರಿಸಿ ಅಂತರಂಗದ ಕರಣಂಗಳೇ ಕಿರಣಂಗಳಾಗಿ.
ಬೆಳಗುವ ಚಿದಂಶವೇ ಪ್ರಾಣಲಿಂಗವು.
ಆ ಮೂಲ ಚೈತನ್ಯವೇ ಭಾವಲಿಂಗವು
ಇದನರಿದು ನೋಡುವ ನೋಟ ಭಾವ ಪರಿಪೂರ್ಣವಾಗಿ
ತಾನು ತಾನಾದಲ್ಲದೆ ಇದಿರಿಟ್ಟು ತೋರುವುದಿಲ್ಲವಾಗಿ
ಅಖಂಡ ಪರಿಪೂರ್ಣವಪ್ಪ ನಿಜವು ತಾನೆ ಕೂಡಲ ಸಂಗಮದೇವಾ.

೨. ಭಕ್ತಿಯಿಲ್ಲದ ಬಡವನಾನಯ್ಯ, ಕಕ್ಕಯ್ಯನ ಮನೆಯಲು ಬೇಡಿದೆ
ಚೆನ್ನಯ್ಯನ ಮನೆಯಲು ಬೇಡಿದೆ, ದಾಸಯ್ಯನ ಮನೆಯಲೂ ಬೇಡಿದೆ
ಎಲ್ಲಾ ಪುರಾತನರು ನೆರೆದು ಭಕ್ತಿ ಬಿಕ್ಷವನಿಕ್ಕಿದರೆ, ಎನ್ನ ಪಾತ್ರೆ ತುಂಬಿತ್ತು
ಕೂಡಲ ಸಂಗಮದೇವಾ.

# ಕನಸಿನ ಕನ್ಯೆ

ಪ. ರಾಮಕೃಷ್ಣಶಾಸ್ತ್ರಿ ಶಿವಶಕ್ತಿನಿಲಯ, ಮಚ್ಚಿನ, ದಕ್ಷಿಣ ಕನ್ನಡ-ಜಿಲ್ಲೆ.

ಅಧ್ಯಾಯ-೧. ರಾಜಾ ವೀರವರ್ಮ ತನ್ನ ವೃದ್ಧಮಂತ್ರಿಯೊಂದಿಗೆ ಹಯವೇರಿ ಕಾಡಿನತ್ತ ಸಾಗಿದ್ದ. ತನ್ನ ಪ್ರಭುವಿನ ಮನದಿಂಗಿತವರಿತಂತೆ ಆ ಹಯಗಳು ನಿಧಾನವಾಗಿ ಸಾಗಿದ್ದುವು. ವೀರವರ್ಮ ಮಂತ್ರಿಯೊಡನೆ ಎಂಥದೊ ಗಹನ ವಿಚಾರದಲ್ಲಿ ಮುಳುಗಿದ್ದ. ದಾರಿ ಎಷ್ಟು ಸಾಗಿತ್ತು ಎತ್ತ ಸಾಗಿತ್ತು ಎಂಬ ಯೋಚನೆಯೂ ಅವರಿಗಿರಲಿಲ್ಲ. ವೀರವರ್ಮ ಹೇಳಿದ, "ಅಧಿಕ ತೆರಿಗೆಯಿಂದ ಪ್ರಜರು ಸುಸ್ತಾದರೆ ಭೂಮಿಯಲ್ಲಿ ಬೆಳೆ ಬೆಳೆಸುವುದನ್ನು ರೈತರು ಬುದ್ಧಿಪೂರ್ವಕವಾಗಿ ಕಡಿಮೆ ಮಾಡುತ್ತಾರೆ. ಮಂತ್ರಿಗಳೇ, ತಾನು ಬೆಳೆಸಿದು-ದೆಲ್ಲ ರಾಜ ಬೊಕ್ಕಸಕ್ಕಾದ ಮೇಲೆ ಮನಃಪೂರ್ವಕವಾಗಿ ದುಡಿಯುವುದಾದರೂ ಏಕೆ ಎಂದು ರೈತರಿಗೆ ತೋರುವುದು ಸ್ವಾಭಾವಿಕವಲ್ಲವೆ?"

ಮಹಾಮಂತ್ರಿ ನುಡಿದ, "ಪ್ರಭುಗಳು ನುಡಿದುದೇನೊ ಸತ್ಯ. ಆದರೆ ಈಗಿರುವ ತೆರಿಗೆಯನ್ನು ಅರ್ಧಕ್ಕರ್ಧ ಇಳಿಸಿದರೆ ಅರಮನೆಯ ಖರ್ಚು ವೆಚ್ಚ ನಡೆಯುದಾದರೂ ಹೇಗೆ? ಸಂರಕ್ಷಣಾ ದಳವನ್ನು ಉಳಿಸಿಕೊಳ್ಳುವುದಾದರೂ ಎಂತು?" ವೀರವರ್ಮ ಅವನ ಮಾತನ್ನು ತಡೆದು, "ಈಗ ನಮ್ಮಲ್ಲಿ ರಣದ ಭೀತಿಯಿಂದ ಅಗತ್ಯಕ್ಕಿಂತ ಹೆಚ್ಚು ಸೈನಿಕರಿದ್ದಾರೆ. ಅವರನ್ನೆಲ್ಲ ಹಳ್ಳಿಗೆ ಕಳುಹಿಸಿ ದುಡಿಯಲು ಹಚ್ಚೋಣ. ಪ್ರತಿ ಹಳ್ಳಿಯಲ್ಲೂ ಸೈನಿಕ ಶಿಕ್ಷಣ ನಡೆಯುವಂತೆ ವ್ಯವಸ್ಥೆ ಮಾಡೋಣ. ನಮ್ಮ ರಾಜ್ಯದ ಪ್ರತಿಯೊಬ್ಬ ಪ್ರಜೆಯೂ ಸೈನಿಕನಾಗಿರುವಂತೆ ಯತ್ನಿಸೋಣ. ಯುದ್ಧ ಬಾರದಂತೆ ಪ್ರಯತ್ನಿಸಿ, ಅನಿವಾರ್ಯವಾಗಿ ಅದು ಸನ್ನಿಹಿತವಾದರೆ ಹಳ್ಳಿಹಳ್ಳಿಯ ತರುಣರನ್ನು ಹುರಿದುಂಬಿಸಿ ಯುದ್ಧಕ್ಕೆ ಕರೆಸೋಣ. ಇದರಿಂದ ನಮ್ಮ ರಾಜ್ಯ ಇಬ್ಬಗೆಯ ಲಾಭವನ್ನು ಪಡೆಯುತ್ತದೆ ಅಲ್ಲವೆ, ಮಂತ್ರಿಗಳೇ' ಎಂದು ಹೇಳಿದ.

ವೃದ್ಧ ಮಂತ್ರಿ ರಾಜನ ಯೋಚನೆಗೆ ತಲೆದೂಗಿದ. ವೀರವರ್ಮ ಪಟ್ಟಕ್ಕೆ ಬಂದ ಮೇಲೆ ಯುದ್ಧದ ಭೀತಿ ಕಳೆದಿತ್ತು. ಅನಿವಾರ್ಯ ಪ್ರಸಂಗದಲ್ಲಿ ಯುದ್ಧ ಸನ್ನಿಹಿತವಾದಾಗ ತನ್ನ ಚಾಕಚಕ್ಯತೆಯಿಂದ ಆತ ಅದನ್ನು ನಿವಾರಣೆ ಮಾಡಿಕೊಂಡು ಬಂದುದರಿಂದ ಮಂತ್ರಿಗೆ ಅವನ ಮೇಲೆ ಅಪಾರ ವಿಶ್ವಾಸ ವಿತ್ತು. ಪ್ರಭುವಿನ ಯಾವ ಯೋಚನೆಯೂ ಜಳ್ಳಲ್ಲ ಎಂದು ತಿಳಿದಿತ್ತು. ಪಟ್ಟಕ್ಕೆ ಬಂದ ಒಂದೇ ಒಂದು ವರ್ಷದಲ್ಲಿ ಅವನು ಪ್ರಜೆಗಳ ಪ್ರೀತಿಯ ಪ್ರಭುವಾಗಿದ್ದ. ತಮ್ಮ ಕಷ್ಟದಲ್ಲಿ ಭಾಗಿಯಾದ ರಾಜನನ್ನು ಪ್ರಜೆಗಳಿಗೆ ತಲೆಯ ಮೇಲೆ ಹೊತ್ತು ಮೆರವಣಿಗೆ ಮಾಡಿದರೂ ಕಡಿಮೆಯೆ ಎಂದು ತೋರಿತ್ತು. ಹಿಂದಿನ ರಾಜರ ಆಳ್ವಿಕೆಯಲ್ಲಿ ಪ್ರಜೆಗಳಿಗೆ ಒಂದು ತೆರ ಔದಾಸಿನ್ಯ ಬಂದಿದ್ದರೆ ಈಗಿನ ರಾಜನ ಒಡೆತನದಲ್ಲಿ ಹೊಸತೊಂದು ಹುರುಪು ಬಂದಿತ್ತು. ರಾಜ್ಯಕ್ಕಾಗಿ ನಾವು ದುಡಿಯಬೇಕು, ರಾಜನ ಸಿಂಹಾಸನಕ್ಕೆ ಪೊಡಮಾಡಬೇಕು

ಎಂಬ ಭಕ್ತಿ, ವಿಶ್ವಾಸ, ಶ್ರದ್ಧೆ ಉಂಟಾಗಿತ್ತು. ಅದನ್ನು ಕಂಡು, ಯಾವ ಅಧಿಕಾರದ ಬಲದಿಂದಾಗದ್ದು ಕೇವಲ ಪ್ರೀತಿಯಿಂದ ಸಾಧಿಸಬಹುದು ಎಂದು ಮಂತ್ರಿ ಖಚಿತ ಮಾಡಿಕೊಂಡಿದ್ದ ರಾಜನ ಸಮ್ಮುಖದಲ್ಲಿ ಅಂತೆಯೆ ನುಡಿದೂ ಇದ್ದ. ಆ ರಾಜ್ಯಕ್ಕೆ ಯುದ್ಧ ಸಹಜವಾಗಿಯೂ ತಪ್ಪಿತು.

ವೀರವರ್ಮನ ಆಳ್ವಿಕೆಯಲ್ಲಿ ಯಾವ ದಾರ್ಷ್ಟ್ಯವೂ ಕಾಣುತ್ತಿರಲಿಲ್ಲ-ಅಧಿಕಾರ ಲಾಲಸೆಯಿರಲಿಲ್ಲ-ಆಡಂಬರವಿರಲಿಲ್ಲ-ಸತ್ಪ್ರಜೆಗಳಿದ್ದರೇ ರಾಜಗದ್ದುಗೆ ಉಳಿದೀತು, ಮಣಿ ಮಕುಟ ಉಳಿದೀತು ಎಂಬ ವಿಶ್ವಾಸದಿಂದ ರಾಜನಾದರೂ ನಡೆದುಕೊಂಡಿದ್ದ. ಬಂದಿದ್ದ ಯುದ್ಧವನ್ನು ಅದೇ ಪ್ರೀತಿ ಪಂಜರವನ್ನು ಮುಂದೊಡ್ಡಿ ತಡೆದಿದ್ದ. ಬರುವ ಯುದ್ಧವನ್ನು ಸಂಧಾನದಿಂದ ಇಲ್ಲದಂತೆ-ಮಾಡಿದ್ದ. ಪ್ರಜರು ಸಂತಸದಿಂದ ಕಾಲ ಯಾಪನೆ ಮಾಡುತ್ತಿದ್ದರು. ಭೂಮಿಯನ್ನು ಹಸನಾಗಿಸಿ ಮನೆ ತುಂಬ ಧಾನ್ಯ ತುಂಬಿಸಿ ಕೈ ತುಂಬ ಹಣ ಮಾಡಿಕೊಂಡಿದ್ದರು. ಹೊಟ್ಟೆ ತುಂಬ ಕೂಳು ತುಂಬಿಸಿಕೊಳ್ಳುತ್ತಿದ್ದರು. ಅಂತಹ ಪ್ರಭುವಿನ ವಾಕ್ಯವನ್ನು ಮರೆಯುವುದು ನ್ಯಾಯವೆ? ವೃದ್ಧಮಂತ್ರಿ ನುಡಿದ ಪ್ರಭುಗಳ ಚಿತ್ತ' ವೀರವರ್ಮ ಹೇಳಿದ, ಆ ಕುರಿತು ನೀವೂ ಯೋಚಿಸಬೇಕು ಮಂತ್ರಿಗಳೇ ನನ್ನೊಬ್ಬನ ಮೇಲೇ ಜವಾಬ್ದಾರಿ ಬಿಡಬಾರದು ನಾವೆಲ್ಲ ಒಂದು.

ಇಷ್ಟು ಮಾತನಾಡುವಾಗ ಕುದುರೆಯೇಕೊ ಬೆಚ್ಚಿ ಎರಡು ಹೆಜ್ಜೆ ಹಿಂದೆ ವೇಗವಾಗಿ ಸರಿಯಿತು. ಇದರಿಂದ ವೀರವರ್ಮ ಕುದುರೆಯ ಬೆನ್ನ ಮೇಲೆ ಅತ್ತಿತ್ತ ಓಲೆದಾಡಿ ಸಾವರಿಸಿಕೊಂಡ. ಮಂತ್ರಿಗೂ ಅದೇ ಸ್ಥಿತಿಯಾಗಿತ್ತು. ಕುದುರೆಗಳೇಕೆ ಹಾಗೆ ನಗೆದುವು ಎಂದು ರಾಜನಿಗೂ ಯೋಚನೆ ಬಂತು. ಅವನು ತನ್ನ ದೃಷ್ಟಿಯನ್ನು ಆ ಅರಣ್ಯದ ಮಧ್ಯೆ ದೂರದೂರಕ್ಕೆ ಬೀರಿದ ಕುರುಚಲು ಪೊದೆಗಳು, ಭೀಮಾಕಾರವಾಗಿ ನಿಂತ ಮರಗಳು, ಒಂದನ್ನೊಂದು ಹೆಬ್ಬಾವಿನಂತೆ ಸುತ್ತಿ ಭೂಮಿಯನ್ನು ಮುತ್ತಿಕ್ಕುವ ಬಿಳಲುಗಳು ಇವಷ್ಟೇ ಅವನ ಕಣ್ಣಿಗೆ ಕಂಡವು. ಮಂತ್ರಿಯೂ ಭಯಾಶ್ಚರ್ಯಗಳಿಂದ ದೂರದೂರ ನೋಡುತ್ತಿದ್ದ.

ಮಂತ್ರಿ ನುಡಿದ, "ಎಲ್ಲೋ ಹುಲಿಯಿರಬೇಕು ಅದರ ವಾಸನೆಗೆ ಕುದುರೆಗಳು ಬೆದರಿರಬೇಕು" ಇದ್ದರೂ ಇರಬಹುದು ಎಂದು ವೀರವರ್ಮ ಆತ್ಮರಕ್ಷಣೆಗಾಗಿ ಒರೆಯಿಂದ ಖಡ್ಗ ಇರಿದು ಝಳಪಿಸಿ ಕುದುರೆಯನ್ನು ಮುಂದೆ ಬಿಟ್ಟ. ಆದರೂ ಕುದುರೆ ಮುಂದೆ ಹೋಗದೆ ನಿಂತಲ್ಲೇ ಎರಡೂ ಕಾಲನ್ನು ಮೇಲೆತ್ತಿ ಕೆನೆಯಿತ್ತು ಆತ ಅದರ ಭುಜ ತಪ್ಪರಿಸಿ ಒತ್ತಾಯಿಸಿದ ಅದು ನಿಂತ ಸ್ಥಳದಿಂದ ಕದಲಲಿಲ್ಲ.

ವೀರವರ್ಮ ಕುದುರೆಯಿಂದಿಳಿದು, ಕುದುರೆಯ ಭೀತಿಗೆ ಕಾರಣವನ್ನರಸಲು ಒಂದೆರಡು ಹೆಜ್ಜೆ ಮುಂದೆ ನಡೆದ. ಆಗ ಕಾಡೊಳಗಿಂದ ಕೋತಿಗಳು ಕಿಚಕಿಚನೆ ಕೂಗಲಾರಂಭಿಸಿ ಮರದಿಂದ ಮರಕ್ಕೆ ಹಾರುವ ಸದ್ದು ಕೇಳಿಸತೊಡಗಿತು. ಎಲ್ಲೊ ಮನುಷ್ಯರ ಸುಳಿವು

ಸಿಕ್ಕಿ ಅವ್ರಹೀಗೆ ಓಡಿಹೋಗಿರಬೇಕು ಎಂದು ಆತಯೋಚಿಸುತ್ತಾ ಇನ್ನೂ ನಾಲ
ಹೆಜ್ಜೆ ಮುಂದಿಟ್ಟ. ಹಾಗೆಯೇ ಮಳ್ಳುಗಿಡ ಗಂಟಿಗಳನ್ನು ಅತ್ತಸರಿಸಿ ಕಾಡೊಳ
ನಡೆದ. ಆಗಭೂಮಿಯೇ ಬಿರಿಯುವಂತಹ ಗರ್ಜನೆಯೊಂದು ಕೇಳಿಸಿತು. ಸ್ತಂಭಿ
ಭೂತನಾಗಿ ನಿಂತ ವೀರವರ್ಮ ತನ್ನ ಕರವಾಲವನ್ನು ಮುಷ್ಟಿಯಲ್ಲಿ ಬಿಗಿದು ದೃಷ್ಟಿಯನ
ಗರ್ಜನೆ ಬಂದತ್ತ ನೆಟ್ಟು ನೋಡುತ್ತಾ ಮತ್ತು ಒಂದು ಹೆಜ್ಜೆ ಮುಂದೆಯೇ ಹೋದ

ಅಧ್ಯಾಯ-೨ ವೀರವರ್ಮನ ಮುಂದುವರಿಯುವಿಕೆಯನ್ನು ಕಂಡು, ನಿಧಾನವಾ
ಅಂಗಾಲನ್ನು ನೆಕ್ಕುತ್ತ ಬಿದ್ದಿದ್ದ ವ್ಯಾಘ್ರ ತನ್ನ ಕಾಯಕವನ್ನು ನಿಲ್ಲಿಸಿ ಬೇಟೆಯ
ತನ್ನ ದೃಷ್ಟಿಯನ್ನು ಕೇಂದ್ರೀಕರಿಸಿ ಅವನು ತನ್ನ ಆಳವಿಗೆ ಬರುವುದನ್ನೆ ಗಮನಿಸು
ಬಾಲವನ್ನು ನೆಲಕ್ಕೆ ಹೊಡೆಯುತ್ತ ಮೈಯನ್ನು ನೀಳವಾಗಿ ಚಾಚಿ ಸಿದ್ಧವಾ
ಮಲಗಿತ್ತು.

ವೀರವರ್ಮ ಮುಂದುವರೆದು ಬರುತ್ತ ತನ್ನ ಕರವಾಲವನ್ನು ಝಳಪಿಸು
ಹುಲಿಗೆ ಹಿಂದಾಗಿ ಹೋಗಲು ಯತ್ನಿಸುತ್ತಿದ್ದ. ಆಗ ಹುಲಿಗೆ ತನ್ನ ಶತ್ರು ಸಮೀ
ಸಿದುದು ತಿಳಿದಿತ್ತು. ಒಂದೇಹಾರಿಕೆಗೆ ಕತ್ತು ಮುರಿಯಲು ತನ್ನ ಹಿಂಗಾಲನೇ
ಒಲವನ್ನು ಹಾಕಿ ಮುಂಗಾಲನ್ನು 'ಭೂಮಿಗೆ ಒತ್ತಿ ಒಂದೇಬಾರಿಗೆ ಹಾರಿತು.

ಆದೈತ್ಯ ಹುಲಿ ತನ್ನ ತಲೆಗೇ ಹರಿದುದರಿಂದ ಆ ಭಾರವನ್ನ ಸಹಿಸಲಾ
ಭೂಮಿಗೊರಗಿದ. ಸಮಯವೆಂಬಂತೆ ಸುಂಯ್ ಗುಡುತ್ತ ವೇಗವಾಗಿ ಬ
ಈಟಿಯೊಂದು ಹುಲಿಯ ಹೃದಯವನ್ನು ಭೇಧಿಸಿ ರಕ್ತವನ್ನು ಕಾರಂಜಿಯ
ಹಾರಿಸಿತು. ಹುಲಿ ಒಮ್ಮೆ ವಿಕಾರವಾಗಿ ಗರ್ಜಿಸಿ ಸತ್ತುರುಳಿತು.

ವೀರವರ್ಮನಿಗೆ ಬಂಡಿಷ್ಟು ಗಾಯವಾದರೂ ಅವನು ಎದ್ದು ನಿಂತು ಈಟಿಯನ್ನೆಸೆ
ತನ್ನ ಪ್ರಾಣರಕ್ಷಣೆ ಮಾಡಿದವರಾರೆಂದು ಸುತ್ತಲೂ ನೋಡಿದ. ಗಂಡುಗಚ್ಚೆ ಹ
ಶರೀರಕ್ಕೆ ಬಿಗಿಯಾದ ರವಿಕೆ ತೊಟ್ಟು, ಪುಷ್ಟವಾದ ತೋಳುಗಳನ್ನು ಬೀಸು
ತರುಣಿಯೊಬ್ಬಳು ಪುಟಿದ ಚೆಂಡಿನಂತೆ ಅಲ್ಲಿಗೆ ಬಂದಳು. ರಾಜ ಒಂದುಕ್ಷಣ
ಸೌಂದರ್ಯನಿಧಿಯನ್ನು ಕಂಡು ರಾಜನಮನಸ್ಸು ಆ ತರುಣಿಯ ಒಂದೇ ಒಂ
ನೋಟದಿಂದ ವಿಚಲಿತವಾಯಿತು, ಅನಿಮಿಷನಾಗಿ ನೋಡತೊಡಗಿದ

"ಪ್ರಭುಗಳು ದೀರ್ಘಾಯುಷಿಗಳು" ನಕ್ಕು ಆತರುಣಿ ನುಡಿದಳು, ''ಅಂದ
ಸುಳ್ಳಾಗುತ್ತಿತ್ತು. ನೀನುಸತ್ಯವಾಗಿಸಿದೆ" ಎಚ್ಚೆತ್ತು ರಾಜ ಮಾತಿನಲ್ಲಿ ಕೃತಜ್ಞ
ಅರ್ಪಿಸುತಿರುವಂತೆ ನುಡಿದ.

ಸಿದ್ಧಗಂಗಾ

“ನನ್ನಿಂದೇನಾದೀತು! ನೋಡಿ ಈ ಭರ್ಚಿಯೇ ಆ ಕೆಲಸ ಮಾಡಿತು” ಎಂದು ಕಿಲ ಕಿಲ ನಕ್ಕಳು ಆಕೆ. ಆ ನಗೆಯಿಂದ ರಾಜನಿಗೆ ಹೇಗೆ ಹೇಗೊ ಆಯಿತು. ಅವನು ಅವಳ ಅಂಗಾಂಗದ ಸುಂದರತೆಯನ್ನೀಂಟುತ್ತ ಹಾಗೆಯೇ ನಿಂತುಬಿಟ್ಟ.

ಬರುವ ಹೊತ್ತು ಕಳೆದು ಮತ್ತೂ ತನ್ನ ಪ್ರಭು ಬರದೆ ಉಳಿದುದರಿಂದ ಹುಲಿಯ ಚೀತ್ಕಾರ ಗರ್ಜನೆಯೂ ಕೇಳಿದುದರಿಂದ ಪ್ರಭುವಿಗೆ ಎಂಥದೊ ಅಪಾಯ ಬಂತೊ ಎಂದು ಅನುಮಾನಿಸಿದ ಮಂತ್ರಿ ಅಂಜುತ್ತಂಜುತ್ತ ಅರಣ್ಯ ಪ್ರವೇಶಿಸಿ ರಾಜನನ್ನು ಹುಡುಕುತ್ತ ಮುಂದುವರಿದ. ಹಾಗೆ ಸಾಗುತ್ತಿರುವಾಗ ಮೃದುವಾದ ಆ ಮಾತು ಕೇಳಿಸಿದುದರಿಂದ ಪಕ್ಕಕ್ಕೆ ತಿರುಗಿದ ಮಂತ್ರಿ ಮುಂದೊತ್ತಿ ನೋಡುವಾಗ ಹುಲಿಯು ರಕ್ತದ ಓಕುಳಿಯಲ್ಲಿ ಹೊರಳುತ್ತಿತ್ತು. ರಾಜನು ಅಪರಿಚಿತಳೊಬ್ಬಳೊಡನೆ ನಿಂತು ಯಾವುದೊ ಭಾವಕ್ಕೆ ಸಿಕ್ಕಿ ಒದ್ದಾಡುತ್ತಿರುವುದನ್ನು ಕಂಡು ಒಮ್ಮೆ ಬಲವಾಗಿ ಕೆಮ್ಮಿದ. ಮಂತ್ರಿ ಅವರ ಸನಿಯಕ್ಕೆ ನಡೆದು, ‘ಇವೆಲ್ಲ ಏನು ಪ್ರಭುಗಳೇ’ ಎಂದು ಕೇಳುವವನಂತೆ ಆಶ್ಚರ್ಯಭರಿತನಾದ ಹಾಗೆ ನಿಂತ.

ವೀರವರ್ಮನಿಗೆ ಮಂತ್ರಿ ಅಲ್ಲಿಗೆ ಬಂದುದು ಸಂತಸವಾಯಿತು. ಭಾವವೊಂದನ್ನು ವ್ಯಕ್ತಪಡಿಸಲಾರದೆ ಪೇಚಾಡುತ್ತಿರುವಾಗ ಸಹಾಯಕ್ಕೊಬ್ಬನು ಸಿಕ್ಕಿದುದು ಅವನಿಗೆ ಸಂತೋಷವೇ. ಅವನು ನುಡಿದ “ಮಂತ್ರಿಗಳೇ, ಈಕೆಯಿಂದ ನನ್ನ ಪ್ರಾಣ ಉಳಿಯಿತು. ಈಕೆ ಯಿಲ್ಲವಾಗುತಿದ್ದರೆ... ಓ, ಅದೇ ಬಹು ಘೋರ!”

‘ಆಂ?’ ಮಂತ್ರಿ ಆಶ್ಚರ್ಯದಿಂದ ರಾಜನ ಶರೀರವನ್ನೊಮ್ಮೆ ನೋಡಿದ ವ್ಯಾಘ್ರನಖದ ಬಾಧೆಯಿಂದ ಅಲ್ಲಲ್ಲಿ ಒಂದಿಷ್ಟು ರಕ್ತ ಬಂದು ಹೆಪ್ಪುಗಟ್ಟಿತ್ತು. ಕೈ ಮೈಗಳಲ್ಲಿ ರಾಜನ ನಿಲುವಂಗಿಯೂ ಒಂದೆರಡು ಕಡೆ ಹರಿದಿತ್ತು. ಅದನ್ನು ಕಂಡು ಪರಿಸ್ಥಿತಿಯನ್ನು ಅರಿತು ಕೊಂಡವನಂತೆ ಆಕೆಯು ಕಡೆಗೆ ಕೃತಜ್ಞತೆಯ ದೃಷ್ಟಿ ಬೀರಿ. “ನೀನು ಯಾರೊ, ತಾಯಿ ನಮಗೆ ಗೊತ್ತಿಲ್ಲ. ಆದರೆ ಪ್ರಭುಗಳ ಜೀವವನ್ನು ರಕ್ಷಿಸ ಬಂದ ಆ ದಯಾಮಯಿ ಚಿಚ್ಛಕ್ತಿಯೆಂದು ನೆನೆಸಲೆ? ಎಂದ.

ಆಕೆಗೆ ಆ ಮಾತಿನಿಂದ ಅಜೀವ ನಾಚುಗೆಯಾಯಿತು. ಆಕೆ ನೆಲವನ್ನು ಹೆಬ್ಬೆಟ್ಟಿನಿಂದ ಕೆರೆದಳು, ಕಡೆಗಣ್ಣೋಟದಿಂದ ರಾಜನ ಹೃಷ್ಟಪುಷ್ಟ ಬಾಹುಗಳನ್ನು ನೋಡಿದಳು. ರಾಜ ಮಂತ್ರಿಯೆಡೆ ನೋಡಿದ. ಏನೋ ಕಣ್ಸನ್ನೆ ಮಾಡಿದ. ಅದನ್ನರಿತ ಮಂತ್ರಿ, ತಾಯೆ, ಪ್ರಭುಗಳು ಕೃತಜ್ಞತೆಯನ್ನು ವ್ಯಕ್ತಪಡಿಸಲಾಗಿ ತಮಗೆ ಉಡುಗೊರೆ ಕೊಡಲು ಅಪೇಕ್ಷಿಸುತ್ತಾರೆ. ತಮ್ಮ ಇಚ್ಛೆ ಏನೆಂಬುದನ್ನು ಪ್ರಕಟಿಸಬಹುದು....ಎಂದ.

ಆಕೆ ಮೌನವಾಗಿ ತುಸು ಹೊತ್ತು ನಿಂತಳು, ಕೊನೆಗೆ ನುಡಿದಳು "ಪ್ರಭುಗಳ ಬಡವಳ ಗುಡಿಸಲಿಗೆ ದಯಮಾಡಿಸಬೇಕು" ರಾಜನಿಗೂ ಅದೇ ಇಚ್ಛೆ. ಅದು ಆಕೆಯ ಬಾಯಿಂದಲೇ ಬರಲಿ ಎಂಬ ಆತುರ ಅವನದು. ಮೊದಲ್ನೋಟದಲ್ಲಿ ರಾಜನ ಹೃದಯ ವನ್ನು ಕದ್ದ ಆ ಘೌಷ್ಠೆಯ ಮೇಲೆ ಅನುಕಂಪ ಮೂಡಿತ್ತು ರಾಜನಿಗೆ.

"ಎಷ್ಟು ದೂರ ಸಾಗಬೇಕೋ"? ಮಂತ್ರಿ ಅನುಮಾನಿಸಿದ. "ಬಹಳೇನೂ ದೂರವಿಲ್ಲ. ಕಾಡನ್ನು ದಾಟಿ, ಹೊಳೆಯೊಂದು ಕಳೆದು ಬತ್ತದ ಗದ್ದೆಯೊಂದರ ಅಂಚ ನಮ್ಮ ಗುಡಿಸಲು. ಅದೇ ಗದ್ದೆ ನಮ್ಮ ಉದರಂಭರಣಕ್ಕಿರುವ ಮಹಾಸೊತ್ತು. ಉಳಿ ವೇಳೆ ಹಳ್ಳಿಹುಡುಗರಿಗೆ ಮಲ್ಲಯುದ್ಧ, ಕುದುರೆ ಸವಾರಿ, ಖಡ್ಗಯುದ್ಧ ಹೇಳಿಕೊಡು ಕೆಲಸ ತಂದೆಯದು. ಈಟಿ ಎಸೆಯುವ ರೀತಿಯನ್ನು ನನಗೆ ಅವರೇ ಕಲಿಸಿದ್ದಾರ ಆಗಾಗನಾನು ಈ ಅರಣ್ಯದಲ್ಲಿ ತಿರುಗಾಡುತ್ತ ಮನಸ್ಸಂತೋಷಕ್ಕಾಗಿ ಮೃಗಗಳ ಬೇ ಯಾಡುತ್ತೇನೆ" ಎಂದಳು ಆಕೆ, "ಅಂಥವರನ್ನು ನೋಡುವುದು ನಮ್ಮ ಸೌಭಾಗ್ಯ ಮಂತ್ರಿ ವಿನಯವಾಗಿ ನುಡಿದ. ಆಕೆ ಮುಂದೆ ಮುಂದೆ ನಡೆದಳು. ರಾಜ, ಮಂ ಅವಳನ್ನು ಹಿಂಬಾಲಿಸಿದರು.

---

## ಅಭಿನಂದನೆ.

ಡಾ॥ ರುದ್ರಯ್ಯನವರನ್ನು ಕರ್ನಾಟಕ ಸರ್ಕಾರ ಗುಲ್ಬರ್ಗ ವಿಶ್ವವಿದ್ಯಾಲಯ ಕುಲಪತಿಗಳನ್ನಾಗಿ ನೇಮಿಸಿದುದನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತ, ತುಂ ಹೃದಯದ ಅಭಿನಂದನೆಗಳನ್ನು ಸಲ್ಲಿಸಲು "ಸಿದ್ಧಗಂಗಾ" ಸಂತೋಷಿಸುತ್ತದೆ.

ಬೆಂಗಳೂರು ವಿಶ್ವವಿದ್ಯಾನಿಲಯದ ಸೆಂಟ್ರಲ್ ಕಾಲೇಜಿನ ಪ್ರಾಚಾರ್ಯರ 1983 ರಿಂದ ಸೇವೆಸಲ್ಲಿಸುತ್ತ ಬಂದಿರುವ ಡಾ॥ ರುದ್ರಯ್ಯನವರಿಗೆ ವಿಶ್ವವಿದ್ಯಾಲಯ ವಿವಿಧ ಹಂತಗಳಲ್ಲಿ ಬೋಧಕರಾಗಿ ಕೆಲಸ ಮಾಡಿರುವ 33 ವರ್ಷಗಳ ಅನುಭವವಿ ಗಣಿತ ಶಾಸ್ತ್ರ ತಜ್ಞರಾದ ಶ್ರೀಯುತರು ದೇಶ ವಿದೇಶಗಳಲ್ಲಿ ನಡೆದ ಹಲವು ಶೈಕ್ಷ ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರಲ್ಲದೆ. 1988-89ರಲ್ಲಿ ನಡೆದ ಭಾರತೀ ವಿಜ್ಞಾನ ಸಮ್ಮೇಳನದ ಗಣಿತದ ವಿಭಾಗದ ಅಧ್ಯಕ್ಷರಾಗಿದ್ದರು. ಶೈಕ್ಷಣಿಕ ಕ್ಷೇತ್ರ ಸಲ್ಲಿಸಿದ ಗಣನೀಯ ಸೇವೆಯನ್ನು ಗಮನಿಸಿ, ರಾಜ್ಯ ಸರ್ಕಾರ 1986 ರಾಜ್ಯೋತ್ಸವ ಪ್ರಶಸ್ತಿ ನೀಡಿ ಸನ್ಮಾನಿಸಿದುದನ್ನು ಇಲ್ಲಿ ಸ್ಮರಿಸುತ್ತ, ತುಮಕೂ ಜಿಲ್ಲೆ. ಬೆಳ್ಳಾವಿ ಗ್ರಾಮದವರಾದ ಡಾ॥ ಎನ್. ರುದ್ರಯ್ಯನವರು ಶ್ರೀ ಸಿದ್ಧಗ ಮಠದ ಸತ್ಪರಂಪರೆಯಲ್ಲಿ ಅರಳಿದ ಪ್ರತಿಭಾವಂತರೆಂಬುದನ್ನು ನೆನೆಯು ಶ್ರೀಯುತರ ಹೊಸ ಹುದ್ದೆಯ ಅಧಿಕಾರಾವಧಿಯಲ್ಲಿ ವಿಶ್ವವಿದ್ಯಾಲಯದ ಅಭಿವೃ ಮುನ್ನಡೆಯುಂಟಾಗಲಿ ಎಂದು ಹಾರೈಸುತ್ತದೆ. "ಸಿದ್ಧಗಂಗಾ."

ಸರಳ ಸ್ವಭಾವದ, ಸ್ನೇಹಶೀಲ ಪ್ರವೃತ್ತಿಯ, ಆಡಳಿತ ದಕ್ಷತೆಗೆ ಹೆಸ ಡಾ॥ ಎನ್. ರುದ್ರಯ್ಯನವರಿಗೆ ಶ್ರೀ ಸಿದ್ಧಗಂಗಾ ಶ್ರೀ ಗುರು ಸಕಲಸನ್ಮ ಗಳನ್ನುಂಟು ಮಾಡಲಿ ಎಂದು ಪ್ರಾರ್ಥಿಸುತ್ತದೆ "ಸಿದ್ಧಗಂಗಾ."

# ವೈರಾಗ್ಯ ಶಿಖಾಮಣಿ ಮಹಾದೇವಿಯಕ್ಕ - ೨

ವಿಳಾಸ :- ಶ್ರೀ ಮೋಟಗಿ ಮಲ್ಲಿಕಾರ್ಜುನ ಅವರು ಅಥಣಿ ಬೆಳಗಾವಿ ಜಿಲ್ಲೆ.

(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)

## ಜನನ ಬಾಲ್ಯ ವಿದ್ಯಾಭ್ಯಾಸ

ಮಹಾದೇವಿಯಕ್ಕಗಳ ಜೀವನದ ವಿಷಯವಾಗಿ ಪ್ರಾಸ್ತವಿಕ ಸಂಗತಿಗಳನ್ನು ...ಲ್ಲಿ ಹೀಗೆ ವಿವರಿಸಬಹುದು. ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ, ...ಮೊಗ್ಗ ಜಿಲ್ಲೆಯ ಉಡುತಡಿ ಎಂಬ ಗ್ರಾಮದ ಶರಣದಂಪತಿಗಳಾದ ನಿರ್ಮಲಶೆಟ್ಟಿ ...ಮತಿದೇವಿಯರ ಗರ್ಭದಿಂದ ಅವತರಿಸಿದಳು ಅಕ್ಕಮಹಾದೇವಿ. ಶಿವಸತಿ ಪಾರ್ವತಿಯ ...ಶಕೃಪೆಯಿಂದ ಭೂಮಿಗೆ ಅವತರಿಸಿಬಂದಿದ್ದ ಮಹಾದೇವಿಯಕ್ಕ ಚಿಕ್ಕಂದಿನಿಂದಲೂ ...ಭಕ್ತಿ-ಶಿವಚಿಂತನೆಯಲ್ಲಿ ಬೆಳೆದು, ಶಿವಜ್ಞಾನ ಸಂಪನ್ನೆಯಾಗಿ ಚೆಲುವೆಚೆನ್ನೆಯೆನಿಸಿ ...ಯದವಳಾಗುವಳು. ಭಾವಬಂಧುರ ನಿಸ್ಸೀಮ ಭಕ್ತಿಪ್ರೇಮ ಪೂರಿತಳಾಗಿ ಚೆನ್ನ-...ಕಾರ್ಜುನನನ್ನೆ ಪತಿಯನ್ನಾಗಿ ವರಿಸುವಳು. ಆಕೆಯನ್ನು ಮದುವೆಯಾಗಬೇಕೆಂಬ ...ಂಕ್ಷೆಯಿಂದ ಬಂದ ಅನೇಕರಿಗೆ, ಅವಳದೊಂದೇ ಒಂದುಮಾತ್ರ ಉತ್ತರ; ನನ್ನಪತಿ ...ಮಲ್ಲಿಕಾರ್ಜುನ. ನಾನುಅನ್ಯರನ್ನು ವರಿಸಲಾರೆ. ಎಂಬುದು ಅಕ್ಕಗಳ ದೃಢ ...ಯವಾಗಿತ್ತು. ಆಕೆ ಜಾಗ್ರತ್-ಸ್ವಪ್ನ-ಸುಷುಪ್ತಿ ಈ ತ್ರಿವಿಧಾವಸ್ಥೆಯಲ್ಲಿಯೂ ಚೆನ್ನ-...ಕಾರ್ಜುನನನ್ನೇ ತನ್ನಮನದಾತ್ಮನನ್ನಾಗಿ ಭಾವಿಸಿ ಆತನ ಚಿಂತನೆಯಲ್ಲಿಯೇ ...ತ್ತಲಿದ್ದಳು. ಓದುಗಲಿತು ವಿದ್ಯಾಪ್ರವೀಣೆಯಾದಳು.

## ಯೌವನದಲ್ಲಿ ಕೌಶಿಕ ರಾಜನ ಅರಮನೆಗೆ ಹೋದುದು

ಒಂದುದಿನ ಅದೇ ಉಡುತಡಿಯ ಅರಸನಾದ ಕೌಶಿಕರಾಜ ವೈಹಾಳಿಗೆಂದು ...ೀಗಿ ಮರಳಬರ ವಾಗ, ಮಹಾದೇವಿಯಕ್ಕ ತನ್ನ ಸಖಿಯರೊಂದಿಗೆ ನಿಂತಿದ್ದನ್ನು ...ಡಿ, ಅವಳ ರೂಪಲಾವಣ್ಯಕ್ಕೆ ಮೋಹಿತನಾಗಿ ಅವಳನ್ನು ಮದುವೆಯಾಗ-...ನ್ನವನು.

ಮಹಾದೇವಿಯಕ್ಕ ರೂಪಲಾವಣ್ಯದಲ್ಲಿ ರತಿಗಿಂತ ಮಿಗಿಲಾಗಿದ್ದವಳು. ಅದರಲ್ಲೂ ...ಈಗ ತುಂಬು ಹದಿನಾರುವರ್ಷದ ಹರೆಯದ ಹರಿಣಾಕ್ಷಿಯಾಗಿ ಕಂಗೊಳಿಸುತ್ತಿದ್ದಳು. ...ಪ್ಪರದ್ರೂಪಳಾದ ಮಹಾದೇವಿಯಕ್ಕಗಳ ಸೌಂದರ್ಯಾತಿಶಯದ ಬಗೆಗೆ, ಮಹಾಕವಿ ...ಹರನ ಬಾಯಿಂದ ಕೇಳುವುದೇ ಇಲ್ಲಿ ಚೆನ್ನು: ಕಾಮನ ಬಾಣದಂತೆ, ಸೋಮನ-...ದಂತೆ, ವಸಂತದ ವಶೀಕರಣದಂತೆ,..............ಕಳಾಪರಿಪೂರ್ಣ ಶರೀರೆಯಾಗಿ ...ಡುತಡಿಯ ಮಹಾದೇವಿಯರು,

ಈ ಬಗೆಯ ಅಕ್ಕನರೂಪಲಾವಣ್ಯಕ್ಕೆ ಮರುಳಾಗಿ ನಿಂತಿದ್ದ ಕೌಶಿಕಮಹಾ
ತನ್ನ ಚಾರರೊಂದಿಗೆ ತನ್ನ ಮನದ ಅಭೀಷ್ಟವನ್ನು ತಿಳಿಸಿ, ಆವನ್ನು ಮಹಾದೇವಿ
ತಾಯಿ ತಂದೆಗಳ ಬಳಿಗೆ ಕಳಿಸಿಕೊಡುವನು. ಅದರಂತೆ ಸೇವಕರು ಇವರಿಗೆ ತಿಳಿಸ
ಈ ಎಲ್ಲಾ ಸಂಗತಿಯನ್ನು ಸೂಕ್ಷ್ಮವಾಗಿ ಅರಿತ ಅಕ್ಕ ನನ್ನ ಮೂರುನಿಯಮಗ
ಕೌಶಿಕಮಹಾರಾಜ ಒಪ್ಪುವುದಾದರೆ ಅವನನ್ನು ಲಗ್ನವಾಗುವೆನೆಂದು ಆ ಸೇವ
ಹೇಳಿಕಳಿಸುವಳು. ಕೂಡಲೇ ಕೌಶಿಕಮಹಾರಾಜ ಮಹಾದೇವಿಯಕ್ಕನ ನ
ನಿಬಂಧನೆಗಳಿಗೊಪ್ಪಿ ಆಕೆಯನ್ನು ತನ್ನ ಅರಮನೆಗೆ ಬರಮಾಡಿಕೊಳ್ಳುವನು ನ
ಕೌಶಿಕಮಹಾರಾಜ ವಚನ ಪಾಲನೆಯಲ್ಲಿ ತಪ್ಪಿದಾಗ, ಮಹಾದೇವಿಯಕ್ಕ ದಿ
ದೇಹಿಯಾಗಿ ಅಲ್ಲಿಂದ ಕಲ್ಯಾಣದ ಕಡೆಗೆ ಹೋಗುವಳು.

ಮಹಾದೇವಿಯಕ್ಕ ತನ್ನನ್ನು ವಿವಾಹವಾಗಬೇಕೆಂದು ಬಯಸಿದ ಕೌಶಿಕಮಹಾರಾಜನಿ
ನನ್ನ ಮೂರು ನಿಯಮಗಳನ್ನು ಪಾಲಿಸುವುದಾದರೆ ನಿನ್ನನ್ನು ಲಗ್ನವಾಗುವೆ, ಎಂದು ಆಕೆ ತಿ
ಅದಕ್ಕೆ ಕೌಶಿಕನು ಸಮ್ಮತಿಸುವನು. ಆ ಮೂರು ನಿಯಮಗಳಿವು

೧. ನೀನು ಜೈನಧರ್ಮವನ್ನು ತ್ಯಜಿಸಿ, ವೀರಶೈವ ಧರ್ಮವನ್ನು ಸ್ವೀಕರಿಸುವುದು.
೨. ನನ್ನ ಇಷ್ಟಲಿಂಗ ಭಕ್ತಿ ಧ್ಯಾನ ಪೂಜಾದಿ ಕ್ರಿಯೆಗಳಿಗೆ ಅಡ್ಡಿಯನ್ನುಂಟು ಮಾಡದಿರು
೩. ನಾನು ಕೈಗೊಂಡ ಗುರುಲಿಂಗ ಜಂಗಮಾರಾಧನೆ ದಾಸೋಹಗಳಿಗೆ ಭಂಗತಾರದಿರವು
   ಮೂರು ನಿಯಮಗಳಿಗೆ ನೀನು ತಪ್ಪಿನಡೆದಲ್ಲಿ ನಾನು ನಿನ್ನಿಂದ ದೂರವಾಗಿ ಹೋ
   ನಿಬಂಧನೆಯನ್ನು ಕೌಶಿಕನಿಗೆ ನಿವೇದಿಸಿದ್ದಳಾಕೆ.

## ಕಲ್ಯಾಣದತ್ತ ಪಯಣ

ಈಗ ಕೌಶಿಕನೊಡನೆ ಮಹಾದೇವಿಯಕ್ಕನ ವಿವಾಹವಾಗಿಲ್ಲ. ತನ್ನ ತಾಯಿ
ಗಳ ಮೇಲೆ ಮುಂದೆ. ಕೌಶಿಕನಿಂದ ಚಿತ್ರಹಿಂಸೆ ಮೊದಲಾದ ಗಂಡಾಂತರ ಉಂ
ಬಹುದೆಂದೂ, ನಾನು ಕೌಶಿಕರಾಜನಿಗೆ ಲಿಂಗದೀಕ್ಷೆಯೇ ಮೊದಲಾದ ಕರಾರು
ಹಾಕಿದರೆ ಅವನು, ಆ ನಿಯಮಗಳನ್ನು ಪಾಲಿಸಲಾಗುವುದಿಲ್ಲವೆಂದು ಮಹಾ
ಸಂಪನ್ನೆಯಾದ ಮಹಾದೇವಿಯಕ್ಕಗಳ ದಿವ್ಯದೃಷ್ಟಿಗೆ ಮೊದಲೇಗೋಚರಿಸಿದ
ಆಕೆ, ಕಾಮಾತುರನಾದ ಕೌಶಿಕನ ಅರಮನೆಗೆ ಹೋಗಿದ್ದಳಷ್ಟೆ. ಇದರಿಂದ
ತಾಯಿ-ತಂದೆಗಳಿಗೆ ಬರಲಿದ್ದ ಪ್ರಾಣಾಪಾಯವುತಪ್ಪಿತು. ಮತ್ತು ಚೆನ್ನಮ
ರ್ಜುನನ್ನೇ ದೃಢವಾಗಿ ನಂಬಿದ ಆದೇವಾಧಿದೇವನಾದವನನ್ನೇ ಪತಿಯ
ಭಾವಿಸಿದ ಮಹಾದೇವಿಯಕ್ಕನಿಗೆ ಕೌಶಿಕನಿಂದಾಗುವ ಉಪಟಳವು ನೀಗಿ
ಉಪಾಯದಿಂದ, ಚೆನ್ನಮಲ್ಲಿಕಾರ್ಜುನನ ಸತೀತ್ವಕ್ಕೆ ಮಹಾದೇವಿಯಕ್ಕನಿಗೆ
ವುಂಟಾಗಿಲ್ಲ, ಈ ಮೊದಲೇ ಕಾಲಕರ್ಮಗಳನ್ನು ಜಯಿಸಿದ್ದ ವೈರಾಗ್ಯನಿಧಿ
ದೇವಿಯಕ್ಕ ಈಗ ಮಾಯೆಯ (ಕಾಮನ) ನ್ನೂ ಜಯಿಸಿ ದೇಹದ ಮೇಲಣ
ಮೋಹಗಳೆಲ್ಲವನ್ನುತೊರೆದು ದಿಗಂಬರಕಾಯಳಾಗಿ ಕೌಶಿಕನ ಅರಮನೆಯಿಂದ
ಹೋದಳು. ಕಲ್ಯಾಣಕ್ಕೆ ಬಸವಾದಿ ಶಿವಶರಣರ ದರ್ಶನಾಕಾಂಕ್ಷಿಯಾಗಿ ಪರಮ
ದಿವ್ಯ, ಕಾಯಳಾಗಿ.

## ಕಲ್ಯಾಣ ಪ್ರವೇಶ-ಕಿನ್ನರಿ ಬ್ರಹ್ಮಯ್ಯನ ಸಂದೇಶ

ಚಿಚ್ಛಕ್ತಿರೂಪಿಣಿಯಾದಮಹಾತೇಜೋಮೂರ್ತಿ ಮಹಾದೇವಿಯಕ್ಕ ದಿಗಂಬರೆಯಾಗಿ ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯಲ್ಲಿ ಬಂದಿದ್ದಾಳೆ ಕಲ್ಯಾಣಪಟ್ಟಣದ ಹೊರವಲಯದಲ್ಲಿ ಈಗ ಕೇಶಾಂಬರೆಯಾಗಿ.

ಇತ್ತ ಕಲ್ಯಾಣದ 'ಅನುಭವಮಂಟಪ' ದಲ್ಲಿ ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಮಡಿವಾಳಮಾಚಿದೇವ, ಒಂದೆಡೆಗೆ ಇವರೆಲ್ಲರು ಕುಳಿತಿದ್ದಾರೆ, ಇನ್ನೊಂದೆಡೆಗೆ ಸೊಡ್ಡಳ ಬಾಚರಸ, ಹಡಪದಪ್ಪಣ್ಣ, ಪಡಿಹಾರಿ ಉತ್ತಣ್ಣ, ಮೋಳಿಗೆಯ ಮಾರಯ್ಯ, ನುಲಿಯ ಚಂದಯ್ಯ, ಕೋಲಶಾಂತಯ್ಯ, ಕುಂಬಾರಗುಂಡಯ್ಯ, ಮೇದಾರಕೇತಯ್ಯ, ಕಿನ್ನರ ಬ್ರಹ್ಮಯ್ಯ, ಮತ್ತು ಖಿಂಡಮಲ್ಲಿನಾಥ, ಮೊಗವಾಡದ ಕೇಶಿರಾಜ ಮೊದಲಾದ ಅಸಂಖ್ಯಾತ ಪ್ರಮಥಗಣಂಗಳು ಕುಳಿತಿರುವರು. ಮಧ್ಯದಲ್ಲಿ ನೀಲಾಂಬಿಕೆ, ನಾಗಲಾಂಬಿಕೆ, ಬೊಂತಾದೇವಿ, ಗೊಗ್ಗವ್ವೆ, ಕಾಳವ್ವೆ, ಅಮುಗೆರಾಯಮ್ಮ, ಮುಂತಾದ ಶಿವಶರಣೆಯರು ಕಂಗೊಳಿಸುವರು. ಈ ಅಸಂಖ್ಯಾತ ಮಹಾಗಣಂಗಳೆಲ್ಲರೂ ಮಹಾನುಭಾವ ಪ್ರಸಂಗಮಂ ಕೇಳಿ, ನಿತ್ಯ ನಿಜತತ್ತ್ವದಲ್ಲಿ ಸಮರಸರಾಗಿ ನಲಿದು ಪರಮಾನಂದಾಬ್ಧಿಯಲ್ಲಿ ಮುಳುಗೇಳ್ದು ಲೋಲಾಡುತ್ತಿರಲು, ಬಸವರಾಜರು ಪ್ರಭುದೇವರೊಡನೆ ಎನ್ನ ಹೆತ್ತತಾಯಿ ಅಕ್ಕಮಹಾದೇವಿಯರು ವಿರಕ್ತಿಯಿಂದ ದಿಗಂಬರೆಯಾಗಿ ಕಾಮಾರಿಯಾಗಿ ಬರುತಿರ್ದಪಳೆಂದು ಬಿನ್ನೈಸಿ ಆಪ್ರಭುದೇವರು ಸಕಲ ಪ್ರಮಥರಿಗೆ ಕಾಮಸಂಹಾರಿ ಎಂಬುದಂ ತೋರಬೇಕೆಂದು ಭಕ್ತಿವಿಸ್ತಾರದಿಂದ ಕಿನ್ನರಯ್ಯಂಗಳಂ ಒಪ್ಪಿಸಿ ಕಳುಹಲು, ಅಕ್ಕಗಳ ದಿಗಂಬರವೇಷಮಂ, ನಿರ್ವಾಣದ ನಿಲುಕಡೆಯಂ. ದಿವ್ಯಸ್ವರೂಪಿನ ಲಾವಣ್ಯಮಂ ಕಂಡು ಅ,ಪರಮಜ್ಞಾನಿಯಪ್ಪ ಕಿನ್ನರಿ ಬೊಮ್ಮಣ್ಣಗಳು ಈಕೆ "ಲಿಂಗಾನುಭಾವ ಸಂಪನ್ನೆಯಾದರೆ ಗುರುತಾಯಿಯೆಂದು ಶರಣೆಂಬೆನು, ಅಲ್ಲಾ ದೇಹಲಜ್ಜಾಭಿಮಾನ ವುಳ್ಳಡೆ ಸ್ತ್ರೀ ಯಾಗಿ ಕೈವಿಡಿವೆನು" ಎಂದು ತನ್ನತಾಂ ನಿಶ್ಚೈಸಿ, ಆ ಮಹಾದೇವಿಯಕ್ಕಗಳ ಒರೆದೊರೆದು ನೋಡುವ ಪ್ರಸ್ತಾವದ ವಚನ.

"ಕಾಯದಲ್ಲಿ ಕಳವಳವಿರಲು ಪ್ರಾಣದಲ್ಲಿ ಮಾಯೆಯಿರಲು ಏತರಮನ ಇದೇತರ ನಿರ್ವಾಣ ಮಹಾಲಿಂಗ ತ್ರಿಪುರಾಂತಕ ನಿನ್ನಸಂಸಾರಿ ಎಂಬನಲ್ಲದೆ ಸಜ್ಜನೆಯೆಂದು, ಕೈವಿಡಿವನಲ್ಲ
ಕೇಳಾ ಮರುಳೆ"

"ನಿನ್ನ ಸ್ವರೂಪ ಕಂಡೆನ್ನದೃಷ್ಟಿ ನೆಟ್ಟುದೆನಗೆ, ನಿನ್ನಲಾವಣ್ಯರಸವಕಂಡು ಮನಹಾರೈಸಿತ್ತೆನಗೆ,
ನಿನ್ನ ಪ್ರೌಢಿಯಿಂದ ಕೂಡಿಹೆನೆಂಬುದು ಭಾವದಲ್ಲಿ ಬಚ್ಚಬರಿಯ ಹೆಂಗುಸಾಗಿ.
ತೋರಿತ್ತೆನಗೆ,
ಮಹಾಲಿಂಗ ತ್ರಿಪುರಾಂತಕ ನೆನಗೊಡ್ಡಿದ ಮಾಯೆಯ ನಿನ್ನ ಸಮಸುಖಕೊಟದೊಳಿದ್ದು ಸ್ವಭಾವ ಭಕ್ತಿಯಿಂ ಗೆಲುವೆನು ಬಾರಾ ಹೆಣ್ಣೆ ಎಂದು ಕೈವಿಡಿದೆನು"

ಇಂತೀ ಮನಭಾವ ದೃಷ್ಟಿಯಿಂ ಮೆಚ್ಚಿ ಹಿಡಿದು ಕೂಡಿಹೆನೆಂಬ ಕಿನ್ನರ ಬೊಮ್ಮಣ್ಣನ
ಮಹಾದೇವಿಯಕ್ಕಗಳು ಝಂಕಿಸಿ ವಿಡಂಬಿಸುವ ಪ್ರಸ್ತಾವದ ವಚನ:

" ನೋಡುವ ಕಂಗಳಿಗೆ ರೂಪಿಂಬಾಗಿರಲು ನೀವು ಮನ ನಾಚದೆ ಬಂದಿರಣ್ಣಾ,
ಕೇಳಿದ ಶ್ರೋತ್ರ ಸೊಗಸಿಗೆ ನೀವು ಮರುಳಾಗಿ ಬಂದಿರಣ್ಣಾ, ನಾರಿಯೆಂಬ ರೂಪಿಗೆ
ನೀವು ಮರುಳಾಗಿ ಬಂದಿರಣ್ಣಾ,
ಮೂತ್ರವು ಬಿಂದು ಒಸರುವ ನಾಳವೆಂದು ಕಂಗಾಣದೆ ಮುಂದುಗೆಟ್ಟು ಬಂದಿರಣ್ಣಾ,
ಬುದ್ಧಿಗೇಡಿತನದಿಂದ ಪರಮಾರ್ಥದ ಸುಖವ ಹೋಗಲಾಡಿಸಿಕೊಂಡು ಇದಾವ
ಕಾರಣ ವೆಂದರಿಯದೆ,
ನೀವು ನರಕ ಹೇತುವ ಮರೆತು ಮನಹೇಸದೆ ಬಂದಿರಣ್ಣಾ,
ಚನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿಹ ಪುರುಷರೆನಗೆ ಸಹೋದರರು.ಛೀ, ಹೋಗಾ
ಮರುಳೆ ! "

" ಬಟ್ಟ ಮೊಲೆಯ ಭರದ ಜವ್ವನದ ಚೆಲುವಕಂಡು ಬಂದಿರಣ್ಣಾ, ಅಣ್ಣಾನಾನು
ಹೆಂಗೂಸಲ್ಲ ;
ಅಣ್ಣಾ ನಾನು ಸೂಳೆಯಲ್ಲ. ಅಣ್ಣಾ ಮತ್ತೆ ನಾನು ಆರೆಂದು ಬಂದಿರಣ್ಣಾ
ಚನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿನ ಪುರುಷನುನಮಗಾಗದ ನೋರೆ ನೋಡಣ್ಣಾ".

" ಎನ್ನಂತೆ ಪುಣ್ಯಗೈದವರುಂಟೆ ? ಎನ್ನಂತೆ ಭಾಗ್ಯಗೆಯ್ದವರುಂಟೆ ? ಕಿನ್ನ
ನಂತಪ್ಪ ಸೋದರನೆನಗೆ !
ಏಳೇಳು ಜನ್ಮದಲ್ಲಿ ಶಿವಭಕ್ತರೆ ಬಳಗವೆನಗೆ ಚನ್ನಮಲ್ಲಿಕಾರ್ಜುನನಂತಪ್ಪ ಗಂ
ನೋಡಾ ಎನಗೆ. "

ಹೀಗೆಂದು ಮಹಾದೇವಿಯಕ್ಕಗಳು ನಿರೂಪಿಸಲು, ಆ ಕಿನ್ನರಯ್ಯಗಳು ಬರಿ
ಮಾತಿನ ಬನ್ನಣೆಯ ಪಸರಿಸೆ ನಾನು ಬಿಡುವೆನೇ ಬಾರೆಂದು ತುಡುಕಿ ಹಿಡಿಯಲು,
ಮಹಾದೇವಿನೀನಿಂತು ಮುಂದುಗೆಡುವರೆ? ನನ್ನ ತನುವನೊಪ್ಪಿಸಿಹೆನು. ನಿನ್ನ ಮನ
ಬಂದಂತೆ ಮಾಡಿಕೊಳ್ಳೆಂದು ಒಪ್ಪಿಸಲು, ಆತಂಸರ್ವಾಂಗಸ್ತನ ಮಾನಂಗಳಂ ಪರುಕ
ನೋಡಲು, ದೇಹಾಭಿಮಾನಗಳಿಲ್ಲದಿರಲು ಆತಂ, ಯೋನಿಯೊಳಂಗುಲಿ ಪ್ರವೇಶ
ಕೊಂಡು, ಮಾಡಲಲ್ಲಿ ಚಿದ್ಬಸ್ಮಪ್ರೊದಲ ನಡುಗಿ ಭೀತಾತುರನಾಗಿ, ತನ್ನ ಮನವಂ ತ
ಸತ್ತೈಸಿಕೊಂಡು ಆ ಅಕ್ಕಗಳ ಶರೀರದಲ್ಲಿ ಎಲ್ಲಿಯೂ ಶಿವತನ್ಮಯವಾಗಿರ್ಪನೆಂ
ಬಿನ್ನೈಸಿದ ಪ್ರಸ್ತಾವದ ವಚನ :

ಮಸ್ತಕವ ಮುಟ್ಟಿನೋಡಿದರೆ ಮನೋಹರನುಳುಮೆ ಕಾಣಬಂದಿತ್ತು.
ಮುಖಕಮಲವ ಮುಟ್ಟಿನೋಡಿದರೆ ಮೂರ್ತಿಯ ಉಳಿವು ಕಾಣಬಂದಿತ್ತು.
ಕೊರಳ ಮುಟ್ಟಿನೋಡಿದರೆ ಗರಳಧರ ನಿರವು ಕಾಣ ಬಂದಿತ್ತು.
ತೋಳುಗಳ ಮುಟ್ಟಿ ನೋಡಿದರೆ ಶಿವನಪ್ಪು ಕಾಣಬಂದಿತ್ತು.
ಉರಸ್ಥಲವ ಮುಟ್ಟಿ ನೋಡಿದರೆ ಕರಸ್ಥಲದಂಗ ಕಾಣಬಂದಿತ್ತು.
ಉಸುರ ಮುಟ್ಟಿ ನೋಡಿದರೆ ಬ್ರಹ್ಮಾಂಡವಡಗಿ ಕಾಣಬಂದಿತ್ತು.
ಗುಹ್ಯವ ಮುಟ್ಟಿ ನೋಡಿದರೆ ಕಾಮದಹನ ಕಾಣಬಂದಿತ್ತು.
ಮಹಾಲಿಂಗ ತ್ರಿಪುರಾಂತಕ ದೇವ, ಮಹಾದೇವಿಯಕ್ಕನ ನಿಲವನರಿಯದೆಅಳುಪಿ ಕೆಟ್ಟೆನು."

ಎಂಗೆಂದು ಕಿನ್ನರಯ್ಯಗಳು ಬಿನ್ನವಿಸಲು, ಇದಕ್ಕೆ ಅಕ್ಕಗಳು ಶಿವನುಕಾಮನಕೊಂದು ಭಸ್ಮವ ಪೂಸಿ ಮನಸಿಜನಾಗಿ ಉಳುಹಿದರೆ, ನಾನಾ ಮನಸಿಜನ ಸುಟ್ಟ ಬೂದಿ ಇದೇಕೊ ಎಂದು ತೋರಿ ನುಡಿವ ಪ್ರಸ್ತಾವದ ವಚನ:

ಅಂಗದ ಭಂಗವ ಲಿಂಗಮುಖದಲ್ಲಿ ಗೆಲಿದೆ. ಮನದ ಭಂಗವ ಅರಿವಿನ ಮುಖದಲ್ಲಿಗೆಲಿದೆ.
ಜೀವನ ಭಂಗವ ಶಿವನ ಭಾವದಿಂದ ಗೆಲಿದೆ, ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ.
ಎನ್ನ ಜವ್ವನದ ಹೊರ ಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯಾ.
ಚೆನ್ನಮಲ್ಲಿಕಾರ್ಜುನ ಕಾಮನಕೊಂದು ಮನಸಿಜನಾಗುಳುಹಿದರೆ, ಮನಸಿಜನ ತಲೆಬರಹವ ನಾನು ತೊಡೆದೆನು"

ಇಂತು ಮಹಾದೇವಿಯಕ್ಕಗಳು ಕಾಮನ ಸುಟ್ಟು ಭಸ್ಮವ ಗುಹ್ಯಸ್ಥಾನದಲ್ಲಿ ತರಿದು ತೋರಲು, ಕಿನ್ನರಿ ಬೊಮ್ಮ ತಂದೆಗಳು ಕಂಡು ನಡನಡನೆ ನಡುಗಿ ಕೆಟ್ಟನೆಂದು ಉಮ್ಮಳಿಸಿ ಮನದಲ್ಲಿ ನೊಂದು ಬಿನ್ನೈಸುವ ಪ್ರಸ್ತಾವದ ವಚನ:

"ವಿಷಯಂಗಳು ವಿಷಮವಾದವಲ್ಲಾ! ಎನ್ನ ವ್ಯಸನಂಗಳು ಹಗೆಯಾದವಲ್ಲಾ!
ಅಳಿಪೆ ಎದೆಹಾವಾಯಿತಲ್ಲಾ !
ಎನ್ನ ಮುಳಿಸೆ ಬರಸಿಡಿಲಾಯಿತಲ್ಲಾ ! ಎನ್ನ ಹುಸಿಯೇ ಮಸೆದಲಗಾಯಿತಲ್ಲಾ!
ಎನ್ನಮಹಾಲಿಂಗ ತ್ರಿಪುರಾಂತಕಕೊಲ್ಲು ಕಾಯಿ ನಿಮ್ಮಧರ್ಮ"

"ಹುಸಿಯೆಂಬ ಅಲಂಗಿಗೆ ಒಡಲೆ ಗುರಿಯಾಯ್ತು ! ವಿಷವೆಂಬ ಅಗ್ನಿಗೆ ತನುವೆ ವಿಂಧ್ಯವಾಯಿತು.
ಏನೆಂಬೆನೇನೆಂಬೆ ವಿಧಿ ಮಾಡಿತ್ತ! ಶಮದಮಾದಿಗಳು ನೆಲೆಗೊಳದೆ ಹೋದವು.
ಮಹಾಲಿಂಗ ತ್ರಿಪುರಾಂತಕನ ಶರಣರೆನ್ನೊಡೆಯರೆಂದರಿಯದೆ ಇದ್ದಕಾರಣ ತೆರಹು ಮರಹಿನಲ್ಲಿ ತಾವೆಡೆಗೊಂಡವು !"

"ಹುಟ್ಟಿತಲ್ಲಾ! ಉಂಟೆನಿಸಿತಲ್ಲಾ! ತರುವಿಟ್ಟಿತಲ್ಲಾರೂಪಾಯಿತಲ್ಲಾ, ನೋಡ ನೋ
ಛಾಯುಗುಂದಿತಲ್ಲಾ,
ನೋಡ ನೋಡ ಭಾವಗುಂದಿತಲ್ಲಾ, ಆರು ವಿಕಾರದಲಾಯಿತು ಹೋ!ಯಿತ
ಮಹಾಲಿಂಗ ತ್ರಿಪುರಾಂತಕ ನಿಮಗೆರಗದತನು."

ಇಂತೂ ಕಿನ್ನರಿ ಬೊಮ್ಮ ತಂದೆಗಳು ನೊಂದು ಅನುತಾಪಿಸುತ್ತಿರಲು, ಮಹಾದೆ
ಯಕ್ಕಗಳು ಕಿನ್ನರಿ ಬೊಮ್ಮಣಂಗಳಂ ಸಂತೈಸುವ ವಚನ:

"ಎಲೆ ಅಣ್ಣಾ ಅಣ್ಣಾ, ನೀವು ಮರುಳರಲ್ಲಾ ಅಣ್ಣಾ ; ಎನ್ನ ನಿನ್ನ ಅಳವೆ?
ಹದಿನಾಲ್ಕು ಲೋಕವ ನುಂಗಿದ ಕಾಮನ ಬಾಣದ ಗುಣ! ಎನ್ನ ನಿನ್ನ ಅಳವೆ ಅಣ್ಣಾ
ವಾರುವ ಮುಗ್ಗಿದಡೆ ಮಿಡಿಯ ಹರಿಯ ಹೊಯ್ವರೆ? ಮುಗ್ಗಿದ ಭಂಗವ ಮುಂ
ರಣದಲ್ಲಿ ತಿಳಿವುದು.

ನಿನ್ನನೀ ಸಂಹರಿಸಿ ಕೈದುವ ಕೊಳ್ಳಿರಣ್ಣಾ! ಚನ್ನಮಲ್ಲಿಕಾರ್ಜುನನೆಂಬ ಹಗ
ಬೆಂಗೊಡದಿರಣ್ಣಾ."
'ನಿಮ್ಮ ನಿಲುವಿಂಗೆ ನೀವು ನಾಚಬೇಡವೆ! ಅನ್ಯರ ಕೈಯಲ್ಲಿ 'ಅಲ್ಲ' ಎನಿಸಿಕೊಂ
ನಡೆನುಡಿ ಏಕೆ?
ಅಲ್ಲ, ಎನಿಸಿಕೊಂಬುದರಿಂದ ಆಕ್ಷಣವೆಸಾವುದು ಲೇಸು, ಕಾಣಾ
ಚನ್ನಮಲ್ಲಿಕಾರ್ಜುನಾ?'

ಹೀಗೆಂದು ಮಹಾದೇವಿಯಕ್ಕಗಳು–ತನ್ನ ಹೊರಚಲುವಿನ ಮೇಲೆ ಕಣ್ಣಿ
ಬಂದ ಆ ಕಿನ್ನರಿಬೊಮ್ಮಣಂಗಳ ಕಣ್ಣರಳಿಸಿ 'ನನ್ನ ಕಂಡು ಕಂಡು ಆರೆಂ
ಬಂದಿರಣ್ಣಾ'? ಎಂದು ಕೇಳಿ ತನ್ನ ಅಚಲವಾದ ದಿವ್ಯಶಕ್ತಿಯನ್ನು ಪ್ರದರ್ಶಿಸುತ್ತಾ
'ಅಣ್ಣಾ ಅಣ್ಣಾ' ಎಂದು ಕರೆದು ತನ್ನ ಸಹೋದರಿತ್ವವನ್ನು ಸಂದರ್ಶಿಸುತ್ತ
ಸಂದೇಶಮಂ ನಿರೂಪಿಸಲು, ಆಗ ಕಿನ್ನರಿಬೊಮ್ಮಣ್ಣಗಳು ಹರುಷವನೆಯ್ದಿ ಬಿನ್ನೈ
ವಚನ:

'ಶರಣಾರ್ಥಿ ಶರಣಾರ್ಥಿ ಎಲೆತಾಯೆ ಎಮ್ಮವ್ವ, ಶರಣಾರ್ಥಿ ಶರಣಾರ್ಥಿ
ಕರುಣಾಸಾಗರ ನಿಧಿಯೆ

ದಯಾಮೂರ್ತಿತಾಯೆ ಶರಣಾರ್ಥಿ ಶರಣಾರ್ಥಿ ಮಹಾಲಿಂಗ ತ್ರಿಪುರಾಂತಕ ನೊ
ತೊಡಕ ನಿ

ಬಿಡಿಸಿದಿರಾಗಿ ನಿಮ್ಮ ದಯದಿಂದ ನಾನು ಹುಲಿಸೆಕ್ಕಿ ಬದುಕಿದೆನು
ಶರಣಾರ್ಥಿ ಶರಣಾರ್ಥಿ ತಾ

ಮತ್ತು ಕಿನ್ನರಿ ಬೊಮ್ಮಯ್ಯಗಳು ಆ ಮಹಾದೇವಿಯಕ್ಕನಿಂದ ಬದುಕಿದೆನೆ
ಎನ್ನ ಭವನಾಸ್ತಿಯಾಯಿತೆಂದು ಬಿನ್ನೈಸಿದ ಪ್ರಸ್ತಾವದ ವಚನ:

ಸಿದ್ಧಗಂಗಾ

"ವಿಷಯಂಗಳು ನಿರ್ವಿಷಯುವಾದವಿಂದು, ಎನ್ನ ಅಳಿಪೆಂಬ ಆರೆವಾವು ಮಡಿಯಿತಿಂದು;
ಎನ್ನ ಹೃದಯು ಕಲ್ಮಷ ತೊಳೆಯಿತ್ತಿಂದು, ಮಹಾಲಿಂಗ ತ್ರಿಪುರಾಂತಕಯ್ಯ,
ಮಹಾದೇವಿಯಕ್ಕಗಳ ಧರ್ಮದಿಂದ ಹಿಂದಣ ಹುಟ್ಟು ಮುರಿಯಿತಿಂದು''

ಇಂತು ಮಹಾದೇವಿಯಕ್ಕಗಳು ಕಿನ್ನರಿಬೊಮ್ಮಿ ತಂದೆಗಳ ಮನೋರಥ ಸಿದ್ಧಿಯಂ ಮಾಡಿ ಒಬ್ಬರಿಗೊಬ್ಬರು ಸಾಂತ್ವನಮನಸ್ಕರಾಗಿ ನಮಸ್ಕರಿಸಿಕೊಂಡು ಆತನನ್ನು ಬೀಳ್ಕೊಂಡು ಅಕ್ಕ ಕಲ್ಯಾಣ ಪಟ್ಟಣ ಪ್ರವೇಶ ಮಾಡುತ್ತಾಳೆ.

ಪರಮ ವೈರಾಗ್ಯ ಶೀಲಳಾದ ಚಿಚ್ಛಕ್ತಿಸ್ವರೂಪಳಾದ ಉಡುತಡಿಯ ಮಹಾದೇವಿಯಕ್ಕ ಲಿಂಗಪತಿ-ಶರಣಸತಿ ಭಾವದಿಂದ ಕಲ್ಯಾಣನಗರದ ಮಹಾದ್ವಾರಕ್ಕೆ ಬಂದು ಆಕೆ, ಈ ಕಲ್ಯಾಣ ಪಟ್ಟಣದ ಮಹಿಮಾತಿಶಯದ ಬಗೆಗೆ ಹೀಗೆ ಹಾಡಿಕೊಂಡಿದ್ದಾಳೆ.

"ಕಲ್ಯಾಣವೆಂಬುದ ನಾರಿಗೆ ಹೊಗಬಾರದು, ಹೊಗಬಾರದು! ಅಸಾಧ್ಯವಯ್ಯಾ.
ಆಸೆ ಆಮಿಷವನಳಿದವಂಗಲ್ಲದೆ ಕಲ್ಯಾಣದತ್ತಲಡಿ ಇಡಬಾರದು.
ಒಳ ಹೊರಗು ಶುದ್ಧವಾದವರಿಗಲ್ಲದೆ ಕಲ್ಯಾಣವ ಹೊಗಬಾರದು.
ನಾನೆಂಬುದ ಹರಿದವಂಗಲ್ಲದೆ ಕಲ್ಯಾಣವ ಹೊಗಬಾರದು.
ಒಳಗು ತಿಳಿದು, ಚನ್ನಮಲ್ಲಿಕಾರ್ಜುನಂಗೊಲಿದು, ಉಭಯ ಲಜ್ಜೆಯಳಿದೆನಾಗಿ,
ಕಲ್ಯಾಣವ ಕಂಡು ನಮೋ ನಮೋ ಎನುತಿರ್ದೆನು!"

ಮುಂದುವರಿಯುತ್ತದೆ

---

ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು!
ಮನಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು !
ಹುದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯ ನೀನು!
ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯ ನೀನು!
ಭಾವ ಶುದ್ಧ ವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯ ನೀನು !
ಪರಿಣಾಮಿಗಳಲ್ಲದವರಲ್ಲಿ ನೈವೇದ್ಯವ ನೊಲ್ಲೆಯಯ್ಯ ನೀನು !
ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವ ನೊಲ್ಲೆಯಯ್ಯ ನೀನು!
ಹೃದಯ ಕಮಲ ಅರಳದವರಲ್ಲಿ ಇರಲೊಲ್ಲೆಯಯ್ಯ ನೀನು !
ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ ಹೇಳಾ ಚನ್ನಮಲ್ಲಿಕಾರ್ಜುನಯ್ಯ.

ಅಕ್ಕಮಹಾದೇವಿ

# ಗ್ರಾಮಾಂತರ ಬಸವಜಯಂತಿ - 229

ಹೆಚ್. ಜಿ. ವೀರಭದ್ರಯ್ಯ.

ಆತ್ಮೀಯ ಶರಣ ಬಂಧುಗಳೇ,

ತುಂಬ ದಿನಗಳಾದ ಮೇಲೆ ಬರೆಯುತ್ತಿದ್ದೇನೆ. 1989 ನೇ ವರ್ಷದಲ್ಲಿ ಬಸವ ಜಯಂತಿ ಹನ್ನೊಂದು ಗ್ರಾಮಗಳಲ್ಲಿ ಜರುಗಿತು. ಅಂದಂತೇ ಆ ಬಗ್ಗೆ ನಿಮ್ಮಗಮನಕ್ಕೆ ತಂದುದನ್ನು ಇಲ್ಲಿ ಮತ್ತೊಮ್ಮೆ ನೆನಪಿಗೆ ತರಬಯಸುತ್ತೇನೆ. ವಾರ್ಷಿಕ ಸಮಾರೋ ಸಮಾರಂಭವೂ ದಿ14-1-90 ರಂದು ಶ್ರೀಮಠದಲ್ಲಿ ನಡೆಯಿತು ಡಾ||ಎಚ್. ತಿಪ್ಪೇರು ಸ್ವಾಮಿಗಳು ಬರೆದ "ಕರ್ತಾರನ ಕಮ್ಮಟ" ದ ತೃತೀಯ ಮುದ್ರಣದ ಬಿಡುಗಡೆಯು ಆಯಿತು, ಪರಮಪೂಜ್ಯ ಶ್ರೀ ಶ್ರೀ ಗಳವರ ಔದಾರ್ಯದಿಂದಾಗಿ ಎಂಟುನೂರು ಪುಟಗ ಬೃಹತ್ ಕಾದಂಬರಿ ಬಸವತತ್ವ ಪ್ರೇಮಿಗಳಿಗೆ ಕೇವಲ ಇಪ್ಪತ್ತೈದು ರೂಪಾಯಿಗಳಿ ದೊರೆಯುವಂತಾಯಿತು. ಸಮಾಜ ಬಾಂಧವರು ಈ ಅವಕಾಶವನ್ನು ಸದುಪಯೋ ಮಾಡಿಕೊಳ್ಳುತ್ತಿದ್ದಾರೆ ಕರ್ತಾರನ ಕಮ್ಮಟದ ಪ್ರತಿಗಳು ನಿರೀಕ್ಷೆಗೂ ಮೀರಿ ಮಾರಾ ವಾಗುತ್ತಿವೆ. ಆಕರ್ಷಕ ರಕ್ಷಾಪುಟ, ಸುಂದರ ಮುದ್ರಣ, ಸ್ವಾಮೀಜಿಯವರ ಭಾವಜಿ ಆಶೀರ್ವಚನದೊಂದಿಗೆ ಕನ್ನಡಸಾಹಿತ್ಯ ಭಂಡಾರದ ಶ್ರೀಮಂತ ಕೃತಿಯಾಗಿ ಪ್ರಕ ವಾಗಿದೆ. ಈ ವೇಳೆಗೆ ನೀವು ಗಮನಿಸಿರಬಹುದು, ಇಲ್ಲವಾದರೆ ಮೊದಲು ಕೊಂಡು ಓ ಪ್ರತಿಯನ್ನು ನಾನೇ ಕಳುಹಿಸಿಕೊಡುವ ವ್ಯವಸ್ಥೆ ಮಾಡುತ್ತೇನೆ. ನೀವು ಇಚ್ಛಿಸಿದ ಗ್ರಾಮಾಂತರ ಬಸವಜಯಂತಿಯ ಮಣಿಹದಲ್ಲಿ ಸಾಹಿತ್ಯ ಪ್ರಕಾಶವೂ ಇದರೊಂ ಸೇರಿ ಇನ್ನಿಷ್ಟು ಅರ್ಥಪೂರ್ಣ ಯೋಜನೆಯಾಗಿ ಮುಂದುವರಿದಿದೆ.

ದಿ 21-1-1990 ರಂದು ತುಮಕೂರು ತಾಲ್ಲೂಕು, ಹೆಬ್ಬೂರು ಹೋ ಬಳ್ಳಗೆರೆ ಗ್ರಾಮದಲ್ಲಿ 1990 ನೆ ವರ್ಷದ ಬಸವ ಜಯಂತಿಯ ಮೊದಲ ಕಾರ್ಯಕ್ರ ಆರಂಭ. ಹೆಬ್ಬೂರು ಹೋಬಳಿ ಈಶ್ವರ ಸೇವಾಸಂಘ ಮತ್ತು ಬಳ್ಳಗೆರೆ ಲಿಂಗ ಬೋರೇಗೌಡರ ಮಕ್ಕಳ ಸಂಯುಕ್ತ ಸಹಕಾರ, ಗ್ರಾಮಾಂತರ ಬಂಧುಗಳ ಮು ಸಮ್ಮೇಳನ ಸುಂದರವಾಗಿ ಅಲಂಕೃತವಾದ ಸಭಾಮಂಟಪ. ತೆಂಗಿನಮರಗಳ ತಂಪ ನೆರಳಿನ ಪರಿಸರ ಮನಸ್ಸಿಗೆ ಉಲ್ಲಾಸ. ರಾಮೇನಹಳ್ಳಿಮಠದ ಪೂಜ್ಯ ಶ್ರೀ ಶಿವಪಂಚಾಕ್ಷರಿ ಸ್ವಾಮಿಗಳಿಂದ ಷಟ್‌ಸ್ಥಲಧ್ವಜಾರೋಹಣ, ಈಶ್ವರ ಸೇವಾ ಸಂ ಅಧ್ಯಕ್ಷರಾದ ಡಾ|| ಹೆಚ್. ಎಸ್. ಎಂ. ಶಾಸ್ತ್ರಿಗಳಿಂದ ಸ್ವಾಗತ. ಎಲ್ಲ ಅಚ್ಚುಕಟ

ಉದ್ಘಾಟನ ಭಾಷಣ ಮಾಡಿದ ಶ್ರೀ ಸಿದ್ಧಗಂಗಾ ಮಠದ ಕಿರಿಯಸ್ವಾ ಗಳಾದ ಪೂಜ್ಯ ಶ್ರೀ ಶ್ರೀ ಸಿದ್ದಲಿಂಗ ಸ್ವಾಮಿಗಳು ನುಡಿದದ್ದು ಹೀಗೆ " ಬಸವ ನವರು " ಏಕಮುಖವಾಗಿ ಚಿಂತಿಸಿದವರಲ್ಲ, ಕಾಯಕದ ಮುಖೇನ ವಿಚಾರಕ್ರಾ

ಾಡಿದವರು. ಕೂಡಲ ಸಂಗನ ಒಲಿಸಲು ಬಂದ ಪ್ರಸಾದಕಾಯವ ಕೆಡಿಸಲಾಗದು
ಂದೇ ದುಡಿದವರು. ಇಹದ ಬದುಕನ್ನೇ ಕೈಲಾಸವನ್ನಾಗಿ ರೂಪಿಸಿದರು. ಇಹದಲ್ಲಿ
ಳೆಯ ಬಾಳನ್ನು ಬಾಳುವ ಕಲೆಯನ್ನು ಕಲಿಸಿಕೊಟ್ಟರು" — ಅಪರಂಜಿಯಂಥ
ಾತುಗಳು ಸ್ಫುಟವಾದ ವಿವರಣೆ. ಆಸ್ತಿಕ ಬಂಧುಗಳಿಗೆ ಹೃದಯ ಮುಟ್ಟುವರೀತಿ
ಲ್ಲರಿಗೂ ಸಂತೋಷ ತಂದಕ್ಷಣಗಳು ಅವು.

ಸಮಾರಂಭದಲ್ಲಿ ಆಶೀರ್ವಚನ ನೀಡಿದ ಕನಕಪುರ ದೇಗುಲಮಠಾಧ್ಯಕ್ಷರು,
ಸವತತ್ವಗಳು ಪೂಜ್ಯ ಸಿದ್ಧಗಂಗಾ ಶ್ರೀ ಶ್ರೀ ಗಳವರು ಆಚರಿಸುತ್ತಿರುವ ಜಯಂತಿ
ಂದಾಗಿ ಗ್ರಾಮೀಣ ಬಂಧುಗಳಿಗೆ ಪರಿಚಯ ವಾಗುತ್ತಿರುವುದು ಶುಭೋದಯದ
ೂಚನೆ ಎಂದರೆ, ಬೆಂಗಳೂರು ಬೇಲಿಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಶಿವರುದ್ರ
್ವಾಮಿಗಳು ಬಸವಣ್ಣ ಏನಗೆಯೂಗುರು ನಿನಗೆಯೂಗುರು ಜಗವೆಲ್ಲಕ್ಕೆಯಾಗುರು
ುಬುದಾಗಿ ವಿಚಾರ ಮಾಡಿದರು.

ಪರಮ ಪೂಜ್ಯ ಶ್ರೀ ಶ್ರೀಗಳು ಅಧ್ಯಕ್ಷ ಪೀಠದಿಂದ ಆಶೀರ್ವಚನ ನೀಡುತ್ತ
ಜೀವನದ ಎಲ್ಲ ಸಮಸ್ಯೆಗಳ ಪರಿಹಾರಕ್ಕೆ ಬಸವಣ್ಣನವರು ಪರಿಹಾರ ಕೊಟ್ಟಿದ್ದಾರೆ.
ಾವುದರಲ್ಲಿ ಕೊಳೆಯಿತ್ತೋ ಅದೆಲ್ಲವನ್ನೂ ತೊಳೆದರು ಬಸವಣ್ಣ. ಅವರು ಬರೀ
ರ್ಮಗುರುವಾಗಿರಲಿಲ್ಲ, ಸಮರ್ಥ ಆರ್ಥಿಕ ತಜ್ಞರೂ ಆಗಿದ್ದರು. ಅಹಂಕಾರ
ಸನಕ್ಕೆ ದಾಸೋಹ ಮಾಧ್ಯಮವನ್ನು ಅವಲಂಬಿಸಿದರು. ಕಾಯಕದಿಂದ ಸೇವಾ
ಕ್ಕೆ ಪಾವಿತ್ರ್ಯತೆಯ ದೀಕ್ಷೆಕೊಟ್ಟರು. ಮಾನವತಾವಾದಿಗಳ ಶ್ರೇಣಿಯಲ್ಲಿ
ಸ್ಥಾನ ಬಸವಣ್ಣನವರದ್ದು"—ಎಂದು ನುಡಿದರು.

ಸಮಾರಂಭದಲ್ಲಿ ಮುಖ್ಯ ಅಥಿತಿಗಳಾಗಿ ಲೋಕಸಭಾಸದಸ್ಯರಾದ ಶ್ರೀ–
ಎಸ್. ಬಸವರಾಜು, ಶಾಸನ ಸಭಾಸದಸ್ಯರಾದ ಶ್ರೀ ಕೆ.ಲಕ್ಕಪ್ಪ, ಶ್ರೀ ಪಂಡಿತ-
ಪ್ಪ ಎರೇಸೀಮೆ, ಶ್ರೀ ಬಿ. ವೀರಭದ್ರಯ್ಯ, ಶ್ರೀ ಹೆಚ್, ವಿ. ವೀರಭದ್ರಯ್ಯ
ರುಗಳು ಮಾತನಾಡಿ ಬಸವಣ್ಣನವರ ಸೇವಾ ಜೀವನದ ವಿವಿಧ ಮುಖಗಳನ್ನು
ಚಯಿಸಿದರು.

ವಿದ್ವಾನ್. ಎಲ್. ಸಿದ್ಧಗಂಗದೇವರು, ಶ್ರೀ ರಂಗಧಾಮಯ್ಯ, ಶ್ರೀಮತಿ
ಂದಾರವರಿಂದ ವಚನ ಗಾಯನ ನಡೆಯಿತು. ಇದೇ ಸಂದರ್ಭದಲ್ಲಿ ಲಿಂಗೈಕ್ಯ
ೀರೇಗೌಡರ ಮಕ್ಕಳಾದ ಶ್ರೀ ಯುತ ಮಹದೇವಪ್ಪನವರನ್ನು ಈಶ್ವರ ಸೇವಾ
ದ ವತಿಯಿಂದ ಶಾಲು ಹೊದಿಸಿ ಸನ್ಮಾನಿಸಲಾಯಿತು.

ಲಿಂಗೈಕ್ಯ ಬೋರೇಗೌಡರ ವಾರ್ಷಿಕ ಶಿವಗಣಾರಾಧನೆಯ ಆಚರಣೆ ಬಸ
ಜಯಂತಿಯೊಂದಿಗೆ ಮೇಳೈಸಿ ಮಹತ್ವ ಪೂರ್ಣವಾಯಿತು.

ರಾತ್ರಿ 'ಜಗಜ್ಯೋತಿ ಬಸವೇಶ್ವರ, ನಾಟಕ ಅಭಿನಯಿಸಿದಾಗ ಹತ್ತು ಸಾ
ಜನತೆ ನಾಟಕನೋಡಿ ಆನಂದಿಸಿತು.

ಮತ್ತೆ ಬರೆಯುತ್ತೇನೆ.

---

## ದಾನಿಗಳಿಗೆ ಇಲ್ಲಿ ಒಂದು ಅಪೂರ್ವ ಅವಕಾಶ.

1. ಶ್ರೀ ಸಿದ್ಧಗಂಗಾ ಮಠದಲ್ಲಿ ನಿತ್ಯ ನಾಲ್ಕು ಸಹಸ್ರ ವಿದ್ಯಾರ್ಥಿಗಳಿಗೆ ದಾಸೋ
   ವ್ಯವಸ್ಥೆ ನಡೆಯುತ್ತಿದೆ.

2. ನಾಲ್ಕು ಸಹಸ್ರ ವಿದ್ಯಾರ್ಥಿಗಳು ವಿವಿಧ ಸಮಾಜದಿಂದ ಬಂದವರಾಗಿರುತ್ತಾ
   ಜಾತ್ಯತೀತ ಮನೋಧರ್ಮವನ್ನು ರೂಢಿಸಿಕೊಂಡು ಬೆಳೆಯುವ ಮುಕ್ತ ವಾ
   ವರಣ ಇಲ್ಲಿನ ವೈಶಿಷ್ಟ್ಯ.

3. ನಿತ್ಯ ಬರುವ ಸಹಸ್ರ ಸಹಸ್ರ ಯಾತ್ರಾರ್ಥಿಗಳಿಗೂ ದಾಸೋಹ ನಡೆಯುತ್ತಿ

4. **"ಸಿದ್ಧಗಂಗೆ ಊಟ ಶಿವಗಂಗೆಯ ನೋಟ" ಗಾದೆ ಮಾತಾಗಿದೆ.**

5. **"ಪ್ರಸಾದ ತೆಗೆದುಕೊಂಡು ಹೋಗಿ" ಎಂಬುದೇ ಪರಮ ಪೂಜ**
   **ಶ್ರೀ ಶ್ರೀ ಗಳವರು** ಕ್ಷೇತ್ರಾರ್ಥಿಗಳಿಗೆಲ್ಲ ಹೇಳುವ ನಿತ್ಯ ಪಂಚಾಕ್ಷರಿ ಮ

6. ಇಂಥ ದಾಸೋಹ ಮಣಿಹದಲ್ಲಿ ನಿಮ್ಮದೂ ಕಾಣಿಕೆ ಸಲ್ಲಿಸಲು ಅವಕಾಶವಿರು

7. ದಾಸೋಹಕ್ಕೆ ಧನ-ಧಾನ್ಯ ರೂಪದಲ್ಲಿ ಯಥಾಶಕ್ತಿ ಕಾಣಿಕೆ ಅರ್ಪಿಸಿ ಧನ್ಯರಾ
   ಇದೊಂದು ಅಪೂರ್ವ ಅವಕಾಶ.

8. ನೀವು ನೀಡುವ ಒಂದು ಸೇರು ಧಾನ್ಯ, ಒಂದು ರೂಪಾಯಿ ಸಾರ್ಥಕ ವಿನಿ
   ಗಕ್ಕೆ ಮೀಸಲಾಗುತ್ತದೆ.

9. ನೀವೂ ದಾಸೋಹದಲ್ಲಿ ಭಾಗಿಗಳಾಗುವ ಪುಣ್ಯ ಸಂಕಲ್ಪ ಇಂದೇ **ಮಾಡುತ್ತಿ**
   **"ಸಿದ್ಧಗಂಗಾ"** ಆಶಿಸುತ್ತದೆ.

# ಕ್ಷೇತ್ರ ವಾರ್ತೆ

ಜಾತ್ರೆ ಮತ್ತು ವಸ್ತುಪ್ರದರ್ಶನಗಳು ಅನೌಪಚಾರಿಕ ಶಿಕ್ಷಣ ಮಾಧ್ಯಮಗಳು. ಭಿವೃದ್ಧಿ ಹೊಂದುತ್ತಿರುವ ನಮ್ಮ ಜನತೆಗೆ ಸಂಸ್ಕೃತಿ, ನಾಗರೀಕತೆ, ಸರ್ಕಾರದ ಧನೆ ಇವುಗಳ ಪ್ರತೀಕವಾಗಿ ಇವು ಪ್ರಭಾವ ಬೀರುತ್ತವೆ. ಈ ದೃಷ್ಟಿಯಿಂದ ಮಠದಲ್ಲಿ ಜಾತ್ರೆ ಮತ್ತು ವಸ್ತು ಪ್ರದರ್ಶನ ಅನೇಕ ವರ್ಷಗಳಿಂದ ವ್ಯವಸ್ಥಿತವಾಗಿ ಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ನಡೆಸಿಕೊಂಡು ತ್ತಿದ್ದಾರೆ.

ಮಹಾಶಿವರಾತ್ರಿ ಸಂದರ್ಭದಲ್ಲಿ ಶ್ರೀ ಮಠದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ- ವರ ಜಾತ್ರಾಮಹೋತ್ಸವ 15 ದಿನಗಳು ವೈಭವಯುತವಾಗಿನಡೆಯಿತು, ತ್ರೆಯ ಅಂಗವಾಗಿ ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಉದ್ಘಾ- ಯನ್ನು ರಾಜ್ಯದ ಮೀನುಗಾರಿಕೆ ಸಚಿವರಾದ ಶ್ರೀ ಟಿ. ಎನ್. ನರಸಿಂಹಮೂರ್ತಿ ವರು ದಿನಾಂಕ 12-2-90 ರಂದು ನೆರವೇರಿಸಿದರು. ವಸ್ತು ಪ್ರದರ್ಶನ ಗ್ರಾಮೀಣ ತೆಗೆ ತಿಳುವಳಿಕೆ ನೀಡುವಲ್ಲಿ ಸಹಕಾರಿಯಾಗಬೇಕು. ಶ್ರೀ ಶ್ರೀ ಗಳು ಸಮಾಜದ ಸ್ರ ಸಹಸ್ರ ಬಡಮಕ್ಕಳ ಶ್ರೇಯೋಭಿವೃದ್ಧಿಗಾಗಿ ಬಹಳವಾಗಿ ಶ್ರಮಿಸುತ್ತಿದ್ದಾರೆ. ತೆಗೆ ಜನತೆಗೆ ಮಾರ್ಗದರ್ಶನ ಮಾಡುತ್ತಿದ್ದಾರೆ. ಅವರು ನಡೆಸಿಕೊಂಡು ಬರುತ್ತಿ- ರ ಲೋಕೋತ್ತರವಾದ ಎಲ್ಲ ಕಾರ್ಯಚಟುವಟಿಕೆಗಳಿಗೆ ನಾಡಿನ ಜನತೆ ಮತ್ತು ರ್ಕಾರ ನೆರವುನೀಡಿ ಪೋಷಿಸಬೇಕೆಂದು ಹೇಳಿದರು.

ಸಮಾರಂಭದ ಮುಖ್ಯ ಅತಿಥಿಯಾಗಿ ಲೋಕಸಭಾ ಸದಸ್ಯ ಶ್ರೀ ಜಿ. ಎಸ್. ವರಾಜು ರವರು ಮಾತನಾಡುತ್ತ ರೈತರು ಕೃತಕ ಗೊಬ್ಬರಗಳಿಗೆ ಮಾರು ಹೋಗದೆ ಭಾವಿಕ ಗೊಬ್ಬರಗಳನ್ನು ಉಪಯೋಗಿಸಬೇಕು. ತುಮಕೂರು ಜಿಲ್ಲೆ ಬರಡು ಮಿಯಾಗಿದ್ದು ನೀರಾವರಿ ಸೌಲಭ್ಯ ಕಲ್ಪಿಸಿಕೊಡುವ ಹೇಮಾವತಿ ಯೋಜನೆ ನ್ನು ತ್ವರಿತಗೊಳಿಸುವಂತೆ ಸರ್ಕಾರವನ್ನು ಒತ್ತಾಯಿಸಿದರು.

ವಿಧಾನ ಪರಿಷತ್ತಿನ ಮುಖ್ಯ ಸಚೇತಕರಾದ ಟಿ. ಹೆಚ್. ನಾರಾಯಣಸ್ವಾಮಿ ವರು ಮಾತನಾಡಿ ಹಳ್ಳಿಗಳಲ್ಲಿ ಇಂಥ ವಸ್ತುಪ್ರದರ್ಶನಗಳು ಬಹಳ ವಿರಳ, ಶ್ರೀಗಳವರು 26 ವರ್ಷಗಳಿಂದ ನಡೆಸಿಕೊಂಡು ಬರುತ್ತಿರುವುದು ಶ್ಲಾಘನೀಯ ದರು.

ಶಾಸಕರಾದ ಶ್ರೀ ಎಸ್. ಷಫಿ ಅಹಮದ್ ಮಾತನಾಡಿ ಶ್ರೀ ಮಠ ಸಾಮಾಜಿಕ ತ್ತು ಶೈಕ್ಷಣಿಕವಾಗಿ ಅಪಾರಸೇವೆ ಸಲ್ಲಿಸುತ್ತಾ ಬಂದಿದೆ ಇದನ್ನು ಸಮಾಜದ ಎಲ್ಲರೂ ಜ್ಞತೆಯಿಂದ ಸ್ಮರಿಸಬೇಕೆಂದರು.

ಶ್ರೀ ಶ್ರೀ ಗಳವರು ಆಶೀರ್ವಚನ ನೀಡಿ ಗ್ರಾಮೀಣ ಪ್ರದೇಶಗಳಲ್ಲಿ ಇಂತ ವಸ್ತು ಪ್ರದರ್ಶನ ಜನ ಜಾಗೃತಿ ಉಂಟುಮಾಡಲು ಉತ್ತಮ ಮಾಧ್ಯಮವಾಗಿ ಬಡತನ ಮತ್ತು ಅನಕ್ಷರತೆ ನಿವಾರಣೆಯಾಗದ ಹೊರತು ದೇಶದ ಪ್ರಗತಿ ಸಾಧ್ಯವಿ ಎಂದು ಹೇಳಿದರು.

ಜಾತ್ರೋತ್ಸವದಲ್ಲಿ ನಡೆದ ಬೆಳ್ಳಿಪಾಲಕಿ, ರಥೋತ್ಸವ ಮತ್ತು ಪಂಚಬ್ರಹೋ ತ್ಸವಗಳು ಆಕರ್ಷಣೀಯವಾಗಿದ್ದು ಲಕ್ಷಾಂತರಜನಗಳು ಪಾಲ್ಗೊಂಡಿದ್ದರು. ಸಂದರ್ಭಗಳಲ್ಲಿ ಮದ್ದಿನ ಪ್ರದರ್ಶನ ಮನಮೋಹಕ "ಪ್ರೇಕ್ಷಕರು ಭಾವಾ ಪಶರಾಗಿ ತಮ್ಮ ಭಕ್ತಿಯ ನಮನಗಳನ್ನು ಅರ್ಪಿಸಿದರು. ಬಂದ ಯಾತ್ರಾರ್ಥಿಗ ಭಕ್ತಾದಿಗಳಿಗೆ ಮತ್ತು ಎಲ್ಲ ರೈತಬಾಂಧವರಿಗೆ 15 ದಿನಗಳ ಕಾಲ ಊಟದ ವ್ಯವ ಮಾಡುವುದು ಉತ್ತಮ ಸಂಪ್ರದಾಯವಾಗಿ ಬೆಳೆದು ಬಂದಿದೆ. ಖುದ್ದಾ ಶ್ರೀ ಶ್ರೀ ಗಳವರು ದಾಸೋಹ ವಿತರಣೆ ಮೇಲ್ವಿಚಾರಣೆಯನ್ನು ನೋಡಿಕೊ ವುದು ಅವರ ಆತ್ಮಾನಂದಕ್ಕೆ ಸಾಕ್ಷಿಭೂತವಾಗಿದೆ.

ದಿನಾಂಕ 26 2.90 ವಸ್ತು ಪ್ರದರ್ಶನದ ಮುಕ್ತಾಯ ಸಮಾರಂಭ ಏ ಟಾಗಿತ್ತು. ಅಧ್ಯಕ್ಷತೆ ವಹಿಸಿದ್ದ ರಾಜ್ಯದ ಕಂದಾಯ ಸಚಿವರಾದ ಶ್ರೀ ಅಜೀ ಸೇಟ್ ಅವರು ಮಾತನಾಡುತ್ತ ನಾನು ಶ್ರೀ ಮಠಕ್ಕೆ ಬಂದದ್ದು ಪರಮಪೂ ಶ್ರೀ ಶ್ರೀ ಗಳವರ ಆಶೀರ್ವಚನ ಪಡೆಯಲು. ವಸ್ತು ಪ್ರದರ್ಶನಗಳನ್ನು ವ್ಯ ಮಾಡುವ ಗುರುತರ ಜವಾಬ್ದಾರಿ ಸರ್ಕಾರಕ್ಕೆ ಸೇರಿದೆ. ಗ್ರಾಮಾಂತರ ಪ್ರದೇಶ ಶ್ರೀ ಶ್ರೀ ಗಳು ಇದನ್ನು ವ್ಯವಸ್ಥೆಗೊಳಿಸಿರುವುದು ರೈತಾಪಿ ಬಂಧುಗಳಿಗೆ ವರ ವಾಗಿದೆ. ಇದರ ಹೆಚ್ಚಿನ ಏಳಿಗೆಗೆ ಸರ್ಕಾರ ಎಲ್ಲರೀತಿಯನೆರವು ನೀಡಬೇಕು, ಇ ಕ್ಕಾಗಿ ಸಾಧ್ಯವಾದ ಎಲ್ಲ ಸಹಾಯ ಸಹಕಾರವನ್ನು ಮುಂದಿನವರ್ಷ ನೀಡುವುದಾಗಿ ಆಶ್ವಾಸನೆ ಇತ್ತರು, ನಾಡಿನ ಜನತೆ ಶ್ರೀ ಶ್ರೀ ಗಳವರ ಜೀ ದರ್ಶನವನ್ನು ಕಣ್ಣಾರೆ ನೋಡಿ ಸ್ಫೂರ್ತಿಪಡೆಯಲು ಶ್ರೀ ಮಠಕ್ಕೆ ಬಂದು ಹೋ ಬೇಕು. ಇಲ್ಲಿ ಕಲಿಯುವ ಮುಖ್ಯ ಅಂಶಗಳೆಂದರೆ ಶ್ರೀಗಳವರ ತಾಳ್ಮೆ, ಶಕ್ತಿಸಾಮ ಮತ್ತು ಸೇವಾಮನೋಭಾವ.

ಮುಖ್ಯ ಅತಿಥಿಯಾಗಿ ವಿಧಾನ ಸಭಾ ಸದಸ್ಯರಾದ ಶ್ರೀ ಕೆ. ಲಕ್ಕಪ್ಪನ ಮಾತನಾಡಿದರು. ಶ್ರೀ ಮಠದ ಚಟುವಟಿಕೆಗಳು ರಾಜ್ಯದ ಜನತೆಯ ತುಂಬಾ ಪ್ರಭಾವ ಬೀರಿವೆ, ಇಲ್ಲಿಯ ಬೃಹತ್ ಸೇವಾ ಕಾರ್ಯಗಳನ್ನು ಸ ಸರ್ಕಾರ ಮತ್ತು ಜನತೆ ನೆರವು ನೀಡುತ್ತಿದ್ದಾರೆ, ಈ ವಸ್ತು ಪ್ರದರ್ಶನ ಜ ಜ್ಞಾನ ತುಂಬುವ ಕಾರ್ಯ ಮಾಡುತ್ತಿದೆ. ರಾಷ್ಟ್ರಮಟ್ಟದಲ್ಲಿ ಶ್ರೀ ಮಠ ಬ

ಾರ್ಯವಾಡಿದೆ. ಇವನ್ನು ಸಹಿಸದ ಕೆಲವು ದುಷ್ಕರ್ಮಿ ಪಟ್ಟಭದ್ರ ಹಿತಾಸಕ್ತಿಗಳು ್ರೀ ಸ್ವಾಮಿಗಳವರ ಬಗ್ಗೆ ಅಪಪ್ರಚಾರ ಮಾಡಿದರು. ಆದರೆ ಅದು ಸೂರ್ಯ ಚಂದ್ರರ ುೇಲೆ ಗ್ರಹಣ ಹಿಡಿದಂತೆ, ಮೋಡ ಮುಸುಕಿದಂತಾಗಿ ಕೊನೆಯಾಯಿತು.

ಮುಖ್ಯ ಅತಿಥಿಯಾಗಿ ತುಮಕೂರು ವಿಧಾನ ಸಭಾ ಸದಸ್ಯರಾದ ಶ್ರೀ ಎಸ್. ಫಿಅಹಮದ್ ಮಾತನಾಡಿ ಜ್ಞಾನದೀಪಿಗೆಯಾಗಿ ಶ್ರೀ ಮಠ ಮತ್ತು ವಸ್ತುಪ್ರದರ್ಶನ ಾರ್ಯವಾಡುತ್ತಿದೆ ಎಂದು ಹೇಳಿದರು.

## –:ಬಹುಮಾನ ವಿತರಣೆ:–

ಹೆಚ್. ಎಂ. ಟಿ. ಕೈಗಡಿಯಾರ ಕಾರ್ಖಾನೆ, ಅರಣ್ಯ ಇಲಾಖೆ, ೃಷಿ ಇಲಾಖೆ, ಶ್ರೀ ಸಿದ್ದಗಂಗಾ ಅಂಧ ಮಕ್ಕಳ ಶಾಲೆಗಳಿಗೆ ವೈಯಕ್ತಿಕ ಾಗಿ ಪಾರಿತೋಷಕ ಬಹುಮಾನಗಳನ್ನು ನೀಡಲಾಯಿತು.

ತೋಟಗಾರಿಕೆ, ಮೀನುಗಾರಿಕೆ, ರೇಷ್ಮೆಇಲಾಖೆ, ನೀರಾವರಿಇಲಾಖೆ ಿವುಗಳಿಗೆ ಪ್ರಥಮ ಬಹುಮಾನಗಳನ್ನು ನೀಡಲಾಯಿತು.

ಶ್ರೀ ಶ್ರೀ ಗಳವರು ಆಶೀರ್ವಚನನೀಡುತ್ತ ಭಾರತಪ್ರಗತಿಯಾಗ ೇಕಾದರೆ ಶೇ. 80ರಷ್ಟು ಇರುವ ಹಳ್ಳಿಗಾಡಿನ ಜನತೆಗೆ ಜೀವನ ಸೌಕರ್ಯಗಳು ೂರೆಯುಬೇಕು. ಇದು ಮಹಾತ್ಮಗಾಂಧಿಯವರ ಆಕಾಂಕ್ಷೆಯಾಗಿತ್ತು. ಇದಕ್ಕೆ ನಜಾಗೃತಿ ಮುಖ್ಯ. ಇದಕ್ಕೆ ವಸ್ತುಪ್ರದರ್ಶನ ಮಾಧ್ಯಮ, ಪ್ರತ್ಯಕ್ಷವಾಗಿ ನೋಡಿ ಳಿಯಲು ಬೆಳಕು ಚೆಲ್ಲುತ್ತದೆ. ಇದು ಹಳ್ಳಿಯ ಜನರಿಗೆ ನಿಲುಕುವ ರೀತಿಯಲ್ಲಿ ರ್ಕಾರ ಸಹಕಾರ ನೀಡಬೇಕಾಗಿದೆ ಎಂದು ಹೇಳಿದರು.

್ರೀ ಕೆ. ಎಂ. ರೇವಣಸಿದ್ದಯ್ಯನವರು ಸ್ವಾಗತಿಸಿದರು,

ಡಾ॥ ಶ್ರೀ ಸಿದ್ದಲಿಂಗಯ್ಯ ವಂದಿಸಿದರು.

## ಪರಮ ಪೂಜ್ಯ ಶ್ರೀ, ಶ್ರೀ. ಗಳವರ
## 1990 ರ ಫೆಬ್ರವರಿ ತಿಂಗಳ ಕೆಲವು ಕಾರ್ಯಕ್ರಮಗಳು.

1-2-90 ಹೊಳೆನರಸಿಪುರ ತಾ|| ಹಳ್ಳಿ ಮೈಸೂರಿನಲ್ಲಿ ಕಾರ್ಯಕ್ರಮ.

2-2-90 ಲಕ್ಷ್ಮೀಪುರದಲ್ಲಿ ಚಂದ್ರಶೇಖರಯ್ಯನವರ ಗೃಹಪ್ರವೇಶ ಪೂಜೆ.

3-2-90 ಶಿವನಹಳ್ಳಿ ಪ್ರೌಢಶಾಲೆ ವಾರ್ಷಿಕೋತ್ಸವದ ಅಧ್ಯಕ್ಷತೆ.

4-2-90 ಸಂಗನ ಬಸವನ ದೊಡ್ಡಿ ಕಾರ್ಯಕ್ರಮ.

5-2-90 ಬಂಗಾರ ಪೇಟೆ ಕಾರ್ಯಕ್ರಮ.

6-2-90 ತುಮಕೂರಿನಲ್ಲಿ ಸಿದ್ಧಗಂಗಾ ಪ್ರೌಢಶಾಲೆಯಲ್ಲಿ ವಾರ್ಷಿಕೋತ್ಸವ ಅಧ್ಯಕ್ಷತೆ.

7-2-90 ತುಮಕೂರಿನಲ್ಲಿ ಕಾರ್ಯಕ್ರಮ.

8-2-90 ಮಾಗಡಿ ತಾ|| ಮೂಟೇಗೌಡನ ಪಾಳ್ಯದಲ್ಲಿ ಕಾರ್ಯಕ್ರಮ.

9-2-90 ಕನಕಪುರ ದೇಗುಲಮಠದಲ್ಲಿ ಶ್ರೀ ನಿರ್ವಾಣಸ್ವಾಮಿಗಳವರ. ಆರಾಧನೆ ಪೂಜೆ.

10-2-90 ತುಮಕೂರಿನಲ್ಲಿ ಮೀಟಿಂಗ್

11-2-90 ಹೊಳೆನಸಿಪುರ ತಾ|| ತೇಜೂರಿನಲ್ಲಿ ಸಮಾರಂಭದ ಅಧ್ಯಕ್ಷತೆ.

12-2-90 ಶ್ರೀ ಮಠದಲ್ಲಿ ವಸ್ತುಪ್ರದರ್ಶನದ ಪ್ರಾರಂಭೋತ್ಸವದ ನೇತೃತ್ವ.

14-2-90 ತುಮಕೂರಿನಲ್ಲಿ ಜವಳಿ ಅಂಗಡಿ ಆರಂಭೋತ್ಸವ, ಪಾದ ಪೂಜೆ.

18-2-90 ಪನ್ನಸಂದ್ರ ದೇಸ್ಥಾನದ ಶಂಕುಸ್ಥಾಪನೆ.

22-2-90 ಹಾಸನದಲ್ಲಿ ಗುರು ಚಲನಚಿತ್ರ ಮಂದಿರ ಆರಂಭೋತ್ಸವದ ಅಧ್ಯ

26-2-90 ಶ್ರೀ ಮಠದಲ್ಲಿ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭದ ನೇತೃ

28-2-90 ಮಧುಗಿರಿ ತಾ|| ನಿಟ್ರಹಳ್ಳಿಯಲ್ಲಿ ಬಸವಜಯಂತಿ ಕಾರ್ಯಕ್ರಮದ ಅ
ಹಾಗೂ ಬಸವೇಶ್ವರ ನಾಟಕ ಪ್ರದರ್ಶನ.

ಸಿದ್ಧಗಂಗಾ

● ಸ್ಥಾಪನೆ : 1915

ತಂತಿ : "ಪ್ಯಾಟಿಮೂನ್"

# ಶಾಸ್ತ್ರೋಕ್ತವಾಗಿ ತಯಾರಿಸಿದ ಸುಗಂಧ ಸಾಮಗ್ರಿಗಳು

ಪ್ರಖ್ಯಾತವಾದ

- ಪರಿಮಳದಶಾಂಗ
- ದೂಪದ ಕೊಡ
- ವಿಭೂತಿ
- ಹವನ ಸಾಮಗ್ರಿಗಳ

ತಯಾರಕರು

MYSORE LILLY BATHI

Y. BASAPPA High Class Perfumer 206, AVENUE ROAD, BANGALORE-2

HAPPY-MOON SPECIAL BATHI

ಶಿವಪೂಜಾ ಸಾಮಗ್ರಿಗಳು ದೊರೆಯುತ್ತದೆ.



ಫೋನ್ : ಅಂಗಡಿ — 28009 ಮನೆ — 224623.